CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೫, ೨೦೦೪ (ಶ್ರಾವಣ ೧೪, ಶಕ ವರ್ಷ ೧೯೨೬) | ಸಂಚಿಕೆ ೩೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಂತಿಮ ಅಧಿಸೂಚನೆ**

**ನಂ. ಕೆ.ಎಸ್.ಎ. ಸಿ.ಆರ್ 75/ 2002-03, ದಿನಾಂಕ: 25ನೇ ಜೂನ್, 2004**

ನಂ. ಕೆ.ಎಸ್.ಎ. ಸಿ.ಆರ್ 75/2002-03, ದಿನಾಂಕ: 03.09.2002 ರ ಪ್ರಿಲಿಮಿನರಿ ಅಧಿಸೂಚನೆಯನ್ನು ದಿನಾಂಕ: 10.10.2002ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವಾಗತ್ ಚಿತ್ರಮಂದಿರದ ಪಕ್ಕದ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ, ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಅಧಿಸೂಚನೆಗೆ ಯಾರಿಂದಲೂ ಆಕ್ಷೇಪಣೆಗಳು ಬರದಿದ್ದುದರಿಂದ, ಪ್ರಶ್ನಿತ ಕೊಳಚೆ ಪ್ರದೇಶವನ್ನು ದಿನಾಂಕ: 17.06.2004ರಂದು ಕೊಳಚೆ ಮಂಡಳಿಯ ಅಧಿಕಾರಿಗಳೊಡನೆ ಸ್ಥಳ ತನಿಖೆ ನಡೆಸಿದೆ. ಪ್ರಶ್ನಿತ ಕೊಳಚೆ ಪ್ರದೇಶದ ಸ್ಥಳದಲ್ಲಿ ಕೊಳಚೆ ನಿರ್ಮೂಲನಾ ಮಂಡಳಿಯಿಂದ ಈಗಾಗಲೇ 152 ಮನೆಗಳನ್ನು ನಿರ್ಮಿಸಲಾಗಿರುತ್ತದೆ. ಸದರಿ ಕೊಳಚೆ ಪ್ರದೇಶದಲ್ಲಿದ್ದ ನಿವಾಸಿಗಳು ರಸ್ತೆ ಪಕ್ಕದಲ್ಲಿ ತಾತ್ಕಾಲಿಕ ಶೆಡ್‌ಗಳಲ್ಲಿ ವಾಸಿಸುತ್ತಿದ್ದಾರೆ. ಸದರಿ ಮನೆಗಳಿಗೆ ಮಹಾನಗರ ಪಾಲಿಕೆ ವತಿಯಿಂದ ನೀರಿನ ವ್ಯವಸ್ಥೆ ಮತ್ತು ಒಳಚರಂಡಿ ವ್ಯವಸ್ಥೆಯನ್ನು ಒದಗಿಸಿದ ನಂತರ ಸದರಿ ರಸ್ತೆ ಬದಿಯಲ್ಲಿನ ತಾತ್ಕಾಲಿಕ ಶೆಡ್‌ಗಳಲ್ಲಿರುವ ಕೊಳಚೆ ನಿವಾಸಿಗಳನ್ನು ಮೇಲ್ಕಂಡ ಹೊಸದಾಗಿ ನಿರ್ಮಿಸಿದ ಮನೆಗಳಿಗೆ ಪುನರ್ವಸತಿ ಮಾಡಲಾಗುವುದೆಂದು ಕೊಳಚೆ ನಿರ್ಮೂಲನಾ ಮಂಡಳಿಯವರು ಸ್ಥಳ ತನಿಖೆ ಕಾಲದಲ್ಲಿ ತಿಳಿಸಿರುತ್ತಾರೆ. ಈ ಪ್ರಕರಣದ ಕಡತದಲ್ಲಿನ ವಿವರಗಳಂತೆ ಸದರಿ ಕೊಳಚೆ ಪ್ರದೇಶವಿರುವ ಜಮೀನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸೇರಿರುತ್ತದೆ. ಬಿ.ಡಿ.ಎ. ರವರು ಸದರಿ ಪ್ರದೇಶವನ್ನು ಈಗಾಗಲೇ ಕೊಳಚೆ ಮಂಡಳಿಗೆ ಹಸ್ತಾಂತರಗೊಳಿಸಿರುತ್ತಾರೆಂದು ತಿಳಿದುಬಂದಿರುತ್ತದೆ. ಸದರಿ ಪ್ರದೇಶವನ್ನು ಸೆಕ್ಷನ್ 3ರ ಅಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸುವ ಬಗ್ಗೆ ಬಿ.ಡಿ.ಎ. ರವರು ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ.

ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ, ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3ರಡಿಯಲ್ಲಿ ಅಂತಿಮವಾಗಿ "ಕೊಳಚೆ ಪ್ರದೇಶ" ವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯಲ್ಲಿರುವ ಜಯನಗರದ ವಿಧಾನ ಸಭಾ ಕ್ಷೇತ್ರದಲ್ಲಿನ ಸ್ವಾಗತ್ ಚಿತ್ರಮಂದಿರದ ಪಕ್ಕದ ಕೊಳಚೆ ಪ್ರದೇಶದ ಚಕ್ಕು ಬಂದಿ ಮತ್ತು ಹದ್ದು ಬಸ್ತು ತಃಖ್ತೆ.

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶವಿರುವ ಜಮೀನಿನ ಮಾಲಿಕರ ಹೆಸರು | ಸ.ನಂ. | ವಿಸ್ತೀರ್ಣ ಎ.ಗುಂ. | ಚಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1. | ಸ್ವಾಗತ್ ಚಿತ್ರ ಮಂದಿರದ ಪಕ್ಕದ ಕೊಳಚೆ ಪ್ರದೇಶ. ಜಯನಗರ ವಿಧಾನ ಸಭಾ ಕ್ಷೇತ್ರ. | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಸಿ.ಟಿ. ಎಸ್. 1348 | 0.21 | ರಸ್ತೆ | ಸ್ವಾಗತ್ ಚಿತ್ರ ಮಂದಿರ | ಖಾಸಗಿ ಆಸ್ತಿ | ಸ್ವಾಗತ್ ಚಿತ್ರ ಮಂದಿರದ ರಸ್ತೆ |

**ಜಿ.ಎಸ್. ನಾರಾಯಣಸ್ವಾಮಿ**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.987

**ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 634/ಸಂವಿ/ಸಿಓಪಿ/2003, ದಿನಾಂಕ: 24ನೇ ನವಂಬರ್, 2003**

ಬೆಂಗಳೂರು ನಗರದಲ್ಲಿ ಆಸ್ಪತ್ರೆ, ಪೂಜಾ ಮಂದಿರ, ಶಾಲಾ ಕಾಲೇಜುಗಳ ಬಳಿ ಓಡಾಡುವ ವಾಹನಗಳು, ಹಾರನ್‌ಗಳನ್ನು ಬಳಸುತ್ತಿದ್ದು ಇದರಿಂದ ಶಬ್ದ ಮಾಲಿನ್ಯ ಉಂಟಾಗುವುದಲ್ಲದೇ ವಿದ್ಯಾರ್ಥಿಗಳಿಗೆ, ರೋಗಿಗಳಿಗೆ ಮತ್ತು ಸಾರ್ವಜನಿಕರಿಗೆ ತುಂಬಾ ತೊಂದರೆ ಉಂಟಾಗುತ್ತಿದೆ. ಆಸ್ಪತ್ರೆ, ಶಾಲಾ ಕಾಲೇಜುಗಳ ಮತ್ತು ಪೂಜಾ ಮಂದಿರಗಳ ಬಳಿ ಶಬ್ದ ಮಾಲಿನ್ಯದ ಬಗ್ಗೆ ಸಾರ್ವಜನಿಕರು ಆಕ್ಷೇಪಣೆ ವ್ಯಕ್ತ ಪಡಿಸಿರುವ ಹಿನ್ನೆಲೆಯಲ್ಲಿ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಬೆಂಗಳೂರು ನಗರದ ಪ್ರಮುಖ ಆಸ್ಪತ್ರೆಗಳು, ಶಾಲಾ ಕಾಲೇಜುಗಳು ಮತ್ತು ಪೂಜಾ ಮಂದಿರಗಳ ಬಳಿ "ನಿಶಬ್ದ ವಲಯ" ಎಂದು ಪರಿಗಣಿಸುವುದು ಅತ್ಯವಶ್ಯಕ ಎಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಇದರೊಂದಿಗೆ ಲಗತ್ತಿಸಿರುವ ಪಟ್ಟಿಯಲ್ಲಿ ನಮೂದಿಸಿರುವ ಆಸ್ಪತ್ರೆ, ಶಾಲಾ ಕಾಲೇಜುಗಳು ಮತ್ತು ಪೂಜಾ ಮಂದಿರಗಳ ಬಳಿ "ನಿಶಬ್ದ ವಲಯ" ಎಂದು ಘೋಷಿಸಿರುತ್ತೇನೆ.

ಅಂತೆಯೇ ಕಲಂ 116 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್, 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಆದೇಶಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 24.11.2003ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಈ ಆದೇಶವು ದಿನಾಂಕ: 24.11.2003ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಆಸ್ಪತ್ರೆಗಳ ವಿವರ**

1. ಎ.ವಿ. ರಸ್ತೆ ಮೆಡಿಕಲ್ ಕಾಲೇಜ್ ವೃತ್ತದಿಂದ ಮಿಂಟೋ ಆಸ್ಪತ್ರೆವರೆಗೆ.
2. 50ನೇ ಅಡಿ ರಸ್ತೆ ಕೆ.ಆರ್. ಆಸ್ಪತ್ರೆ ಬಳಿ
3. ಚಾಮರಾಜಪೇಟೆ 5ನೇ ಮುಖ್ಯ ರಸ್ತೆ, ವೆನ್‌ಲಾಕ್ ಆಸ್ಪತ್ರೆ ಬಳಿ
4. ಕೆಂಪೇಗೌಡನಗರ ಮುಖ್ಯ ರಸ್ತೆ, ಕಾರ್ಪೊರೇಷನ್ ಹೆರಿಗೆ ಆಸ್ಪತ್ರೆ ಬಳಿ
5. ಸೋಮೇಶ್ವರನಗರ ಮುಖ್ಯ ರಸ್ತೆ ನಿಮಾನ್ಸ್ ಆಸ್ಪತ್ರೆ ಬಳಿ
6. ಜಯನಗರ 8ನೇ ಬ್ಲಾಕ್, 40ನೇ ಕ್ರಾಸ್, ಪ್ರಭಾ ಐ ಕ್ಲಿನಿಕ್ ಬಳಿ
7. ಜಯನಗರ 46ನೇ ಕ್ರಾಸ್, ಕ್ರಿಷ್ಣಾ ಸೇವಾಶ್ರಮ ಆಸ್ಪತ್ರೆ ಬಳಿ
8. ಜಯನಗರ 11ನೇ ಮುಖ್ಯ ರಸ್ತೆ, ಶಾಂತಿ ಪಾಲಿಕ್ಲಿನಿಕ್ ಬಳಿ
9. ರಾಜಾಜಿನಗರ 6ನೇ ಮುಖ್ಯ ರಸ್ತೆ, ಸ್ಪಂದನ ನರ್ಸಿಂಗ್ ಹೋಂ ಬಳಿ
10. ಎಂ.ಎಸ್. ರಾಮಯ್ಯ ರಸ್ತೆ, ಸುಬ್ಬಯ್ಯ ಆಸ್ಪತ್ರೆ ಬಳಿ
11. ಟ್ಯಾಂಕ್ ಬಂಡ್ ರಸ್ತೆಯಲ್ಲಿ ಆಯುರ್ವೇದಿಕ್ ಆಸ್ಪತ್ರೆ ಬಳಿ ಸುಮಾರು 100' ಅಡಿ ಅಂತರದಲ್ಲಿ
12. ಬಳೆಪೇಟೆ ವೃತ್ತದ ಬಳಿ ಇರುವ ಮಹಾನಗರ ಆಸ್ಪತ್ರೆ ಬಳಿ ರಸ್ತೆಯ ಎರಡೂ ದಿಕ್ಕಿನಲ್ಲೂ ಸುಮಾರು 100 ಅಡಿ ಅಂತರದಲ್ಲಿ
13. ನಾಗರಬಾವಿ ಮುಖ್ಯ ರಸ್ತೆಯಲ್ಲಿರುವ ಶ್ರೀ ಗುರುಶ್ರೀ ನರ್ಸಿಂಗ್ ಹೋಂ ಆಸ್ಪತ್ರೆ ಬಳಿ
14. ಎಲ್.ಐ.ಸಿ. ರಸ್ತೆಯಲ್ಲಿರುವ ಪೆನಸಿಯಾ ಆಸ್ಪತ್ರೆ ಬಳಿ
15. ಎಂ.ಸಿ. ಬಡಾವಣೆಯ ಮಹಾನಗರ ಪಾಲಿಕೆಯ ಆಸ್ಪತ್ರೆ ಬಳಿ
16. ಇಂದಿರಾನಗರ ಸಿ.ಎಂ.ಹೆಚ್. ರಸ್ತೆಯ, ಸಿ.ಎಂ.ಹೆಚ್. ಆಸ್ಪತ್ರೆ ಬಳಿ
17. ಇಂದಿರಾನಗರ 7ನೇ ಮುಖ್ಯ ರಸ್ತೆ, ಇ.ಎಸ್.ಐ. ಆಸ್ಪತ್ರೆ ಬಳಿ
18. ಇಂದಿರಾನಗರ 100 ಅಡಿ ರಸ್ತೆಯ ಜಿ.ಜಿ. ಆಸ್ಪತ್ರೆ ಬಳಿ
19. ಇಂದಿರಾನಗರ ಜೋಡಿ ರಸ್ತೆ, ಅಮರ್ ಜ್ಯೋತಿ ನರ್ಸಿಂಗ್ ಹೋಂ ಬಳಿ
20. ಹಳೇ ಮದ್ರಾಸ್ ರಸ್ತೆ, ಐಸೋಲೇಶನ್ ಆಸ್ಪತ್ರೆ ಬಳಿ
21. ಹೆಚ್.ಎ.ಎಲ್. ರಸ್ತೆ ಏರ್‌ಫೋರ್ಸ್ ಕಮಾಂಡ್ ಆಸ್ಪತ್ರೆ ಬಳಿ
22. ಮರ್ಫಿ ಟೌನ್ ರಸ್ತೆ ಇ.ಎಸ್.ಐ. ಆಸ್ಪತ್ರೆ ಬಳಿ
23. ಆರ್.ಕೆ. ಮಠ್ ರಸ್ತೆ ಅಲಸೂರು ಡಿಸ್ಪೆನ್ಸರಿ ಇ.ಎಸ್.ಐ. ಆಸ್ಪತ್ರೆ ಬಳಿ
24. ದೊಮ್ಮಲೂರು ಎಲ್.ಎಫ್. ಡಿಸ್ಪೆನ್ಸರಿ ಬಳಿ
25. ಅಲಸೂರು ಮುನಿಸ್ವಾಮಪ್ಪ ದೊಡ್ಡಮ್ಮ ಮೆಟರ್‌ನಿಟಿ ಹೋಂ ಬಳಿ

26. ಅಲಸೂರು ಓ.ಎಂ. ರಸ್ತೆಯ ಕಾರ್ಪೊರೇಷನ್ ಡಿಸ್ಪೆನ್ಸರಿಯ ಬಳಿ
27. ಅಲಸೂರು ಸಿ.ಬಿ. ರಸ್ತೆಯ ಕೇಂಬ್ರಿಡ್ಜ್ ನರ್ಸಿಂಗ್ ಹೋಂ ಬಳಿ
28. ದೊಮ್ಮಲೂರು ಶಾಮಲಾ ರೆಡ್ಡಿ ನರ್ಸಿಂಗ್ ಹೋಂ ಬಳಿ
29. ಅಲಸೂರು ಲೀಕ್ ಮ್ಯಾವ ನರ್ಸಿಂಗ್ ಹೋಂ ಬಳಿ
30. ರುಸ್ತುಂ ಬಾಗ್ ರಸ್ತೆ ಮಣಿಪಾಲ್ ಆಸ್ಪತ್ರೆ ಬಳಿ
31. ಮಗದಂ ಆಸ್ಪತ್ರೆ ಬಳಿ
32. ಮಾರತ್ ಹಳ್ಳಿ ವರ್ತೂರು ರಸ್ತೆ ಅಕ್ಷಯ ಮಲ್ಯ ನರ್ಸಿಂಗ್ ಹೋಂ ಬಳಿ
33. ಮಾರತ್ ಹಳ್ಳಿ ವರ್ತೂರು ರಸ್ತೆ ಎಂ.ಜಿ.ಎ. ನರ್ಸಿಂಗ್ ಹೋಂ ಬಳಿ
34. ಸ್ಟಾಂಡೇಜ್ ರಸ್ತೆ ಎಸ್.ಡಿ.ಎ. ಆಸ್ಪತ್ರೆ
35. ಸ್ಪೆನ್ಸರ್ ರಸ್ತೆ, ಪಾಲಿಕ್ಲಿನಿಕ್ ಬಳಿ
36. ಚಾರ್ಲ್ಸ್ ಕ್ಯಾಂಪ್ ಬೆಲ್ ರಸ್ತೆ, ಶ್ರೀನಿವಾಸ ನರ್ಸಿಂಗ್ ಹೋಂ ಬಳಿ
37. ಕಮ್ಮನಹಳ್ಳಿ ರಸ್ತೆ, ಸತ್ಯ ಆಸ್ಪತ್ರೆ ಬಳಿ
38. ಲಿಂಗರಾಜಪುರ ರಸ್ತೆ, ಸುಂದರ್ ಆಸ್ಪತ್ರೆ ಬಳಿ
39. ಆಸ್ಪತ್ರೆ ರಸ್ತೆ, ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ ಬಳಿ
40. ಇನ್‌ಫ್ಯಾಂಟ್ರಿ ರಸ್ತೆ ಮೆಡಿನೋವ ಆಸ್ಪತ್ರೆ ಬಳಿ
41. ವೆಂಕಟಸ್ವಾಮಿ ನಾಯ್ಡು ರಸ್ತೆ, ಗೌಸಿಯಾ ಆಸ್ಪತ್ರೆ ಬಳಿ
42. ವೀರಪಿಳ್ಳೈ ಸ್ಟ್ರೀಟ್ ಮಂಜುಶ್ರೀ ನರ್ಸಿಂಗ್ ಹೋಂ ಬಳಿ
43. ಬ್ರಾಡ್‌ವೇ ರಸ್ತೆ ಸಿ.ಎಸ್.ಐ ಆಸ್ಪತ್ರೆ ಬಳಿ
44. ಹೇನ್ಸ್ ರಸ್ತೆ, ಎ.ಎಸ್.ಐ. ಆಸ್ಪತ್ರೆ ಬಳಿ
45. ತಿಮ್ಮಯ್ಯ ರಸ್ತೆ ಕಾರ್ಪೊರೇಷನ್ ಹೆರಿಗೆ ಆಸ್ಪತ್ರೆ ಬಳಿ
46. ಸೇಂಟ್ ಜಾನ್ಸ್ ಚರ್ಚ್ ರಸ್ತೆ ಸಂತೋಷ್ ಆಸ್ಪತ್ರೆ ಬಳಿ
47. ನೆಹರೂಪುರಂ ಕಾರ್ಪೊರೇಷನ್ ಆಸ್ಪತ್ರೆ ಬಳಿ
48. ಟ್ಯಾಂಕ್ ಬಂಡ್ ರಸ್ತೆ, ಲೇಕ್ ಸೈಡ್ ಆಸ್ಪತ್ರೆ ಬಳಿ
49. ರಾಮಮೂರ್ತಿ ನಗರ ಮುಖ್ಯ ರಸ್ತೆ ಮಣಿಪಾಲ್ ಪಾಲಿಕ್ಲಿನಿಕ್ ಆಸ್ಪತ್ರೆ ಬಳಿ
50. ಹಳೆ ಮದ್ರಾಸ್ ರಸ್ತೆ, ದೀಪಾ ಆಸ್ಪತ್ರೆ ಬಳಿ
51. ಆಡುಗೋಡಿ ಲಷ್ಕರ್ ರಸ್ತೆ, ಕಾರ್ಪೊರೇಷನ್ ಆಸ್ಪತ್ರೆ ಬಳಿ
52. ಆಡುಗೋಡಿ ಮುಖ್ಯ ರಸ್ತೆ, ಕೋರಮಂಗಲ ರಸ್ತೆ ಕಾರ್ಪೊರೇಷನ್ ಆಸ್ಪತ್ರೆ ಬಳಿ
53. ವಿಲ್ಸನ್ ಗಾರ್ಡನ್ ಮುಖ್ಯ ರಸ್ತೆ, ಕಾರ್ಪೊರೇಷನ್ ಹೆರಿಗೆ ಆಸ್ಪತ್ರೆ ಬಳಿ
54. ನೃಪತುಂಗ ರಸ್ತೆ ಮಾರ್ಥಾಸ್ ಆಸ್ಪತ್ರೆ ಬಳಿ
55. ಸಂಪಂಗಿರಾಮನಗರ ರಸ್ತೆ, ಸಿಂಧಿ ಆಸ್ಪತ್ರೆ ಬಳಿ
56. ಎನ್.ಆರ್. ರಸ್ತೆ, ಎಲ್ಲಮ್ಮ ದಾಸಪ್ಪ ಆಸ್ಪತ್ರೆ ಬಳಿ
57. ದೊಡ್ಡ ಬೀರದೇವರ ರಸ್ತೆ (ಗ್ರಾಂಟ್ ರಸ್ತೆ) ಮಲ್ಯ ಆಸ್ಪತ್ರೆ ಬಳಿ
58. ಕ್ಯಾಂಪ್ ಬೆಲ್ ರಸ್ತೆ, ಸೇಂಟ್ ಫಿಲೋಮಿನ ಆಸ್ಪತ್ರೆ ಬಳಿ
59. ಶಾಂತಿನಗರ ಎಲ್ಲಮ್ಮ ದಾಸಪ್ಪ ಆಸ್ಪತ್ರೆ ಬಳಿ
60. ಈಗಲ್ ಸ್ಟ್ರೀಟ್, ಅಗರ್‌ವಾಲ್ ಕಣ್ಣಿನ ಆಸ್ಪತ್ರೆ ಬಳಿ
61. ಶಾಂತಿನಗರ ಸೀತಾ ಭತೇಜ ನರ್ಸಿಂಗ್ ಹೋಂ ಬಳಿ
62. ಲ್ಯಾಂಗ್‌ಫೋರ್ಡ್ ಗಾರ್ಡನ್ ರಿಪಬ್ಲಿಕ್ ನರ್ಸಿಂಗ್ ಹೋಂ ಬಳಿ
63. ಹೇನ್ಸ್ ರಸ್ತೆ, ಶಂಕರಾಂಬಾಳ್ ನರ್ಸಿಂಗ್ ಹೋಂ ಬಳಿ
64. ನೀಲಸಂದ್ರ ಪ್ರೈಮರಿ ಹೆಲ್ತ್ ಯೂನಿಟ್ ಬಳಿ
65. ಹೊಸೂರು ರಸ್ತೆ, ಸಾದತ್ ಹೆಲ್ತ್ ಸೆಂಟರ್ ಬಳಿ
66. ನಂಜಪ್ಪ ವೃತ್ತ ಮಹಾನಗರ ಪಾಲಿಕೆ ಮೆಟರ್ನಿಟಿ ಹೋಂ ಬಳಿ
67. ವಿಕ್ಟೋರಿಯಾ ರಸ್ತೆಯ 3ನೇ ಕ್ರಾಸ್ ಇ.ಎಸ್.ಐ. ಆಸ್ಪತ್ರೆ ಬಳಿ
68. ವಿವೇಕನಗರ ಎಲ್.ಎ.ರಸ್ತೆ ಪ್ರಾಥಮಿಕ ಆರೋಗ್ಯ ಕೇಂದ್ರದ ಬಳಿ
69. ವಿವೇಕನಗರ 4ನೇ ಮುಖ್ಯ ರಸ್ತೆ, ಇ.ಎಸ್.ಐ. ಡಿಸ್ಪೆನ್ಸರಿ ಆಸ್ಪತ್ರೆ ಬಳಿ

70. ವಿವೇಕನಗರ 4ನೇ ಮುಖ್ಯ ರಸ್ತೆ, ಶ್ರೀರಾಮ ನರ್ಸಿಂಗ್ ಹೋಂ ಬಳಿ
71. ವಿವೇಕನಗರ 2ನೇ ಕ್ರಾಸ್, ಈಜಿಪುರ, ಸಾರಥಿ ನರ್ಸಿಂಗ್ ಹೋಂ ಬಳಿ
72. ಬನ್ನೇರುಘಟ್ಟ ರಸ್ತೆ, ಜಯದೇವ ಹೃದ್ರೋಗ ಆಸ್ಪತ್ರೆ ಬಳಿ
73. ಸ್ವಾಗತ್ ಮುಖ್ಯ ರಸ್ತೆ, ಸಾಗರ್ ಅಪೋಲೋ ಆಸ್ಪತ್ರೆ ಬಳಿ
74. ಜಯನಗರ 4ನೇ ಟಿ. ಬ್ಲಾಕ್, ಜನರಲ್ ಆಸ್ಪತ್ರೆ ಬಳಿ
75. ಪಿ.ಜಿ. ಹಳ್ಳಿ, 2ನೇ ಮುಖ್ಯ ರಸ್ತೆ, ಸರ್ಕಾರಿ ಹೆರಿಗೆ ಆಸ್ಪತ್ರೆ ಬಳಿ
76. ವಯ್ಯಾಲಿಕಾವಲ್ 1ನೇ ಕ್ರಾಸ್, 6ನೇ ಮುಖ್ಯ ರಸ್ತೆ, ರಾಮಕೃಷ್ಣ ನರ್ಸಿಂಗ್ ಹೋಂ ಬಳಿ
77. ಸದಾಶಿವನಗರ, ರಮಣ ಮಹರ್ಷಿ ರಸ್ತೆ, ಶ್ರೀ ಗಣೇಶ ನರ್ಸಿಂಗ್ ಹೋಂ ಬಳಿ
78. ವಯ್ಯಾಲಿಕಾವಲ್ 15ನೇ ಕ್ರಾಸ್, ರಮಣಿ ಆರ್ಥೋಪೆಡಿಕ್ ಸೆಂಟರ್ ಬಳಿ
79. ಕ್ರಿಸೆಂಟ್ ರಸ್ತೆ, ಮಲ್ಲಿಗೆ ಮೆಡಿಕಲ್ ಸೆಂಟರ್ ಬಳಿ
80. ಕನ್ನಿಂಗ್‌ಹ್ಯಾಂ ರಸ್ತೆ, ಪೊಕಾರ್ಡ್ ಆಸ್ಪತ್ರೆ ಬಳಿ
81. ವಸಂತನಗರ ಮಿಲ್ಲರ್ಸ್ ರಸ್ತೆ, ಜೈನ್ ಆಸ್ಪತ್ರೆ ಬಳಿ
82. ಮಾಧವನಗರ ಹರೆ ಕೃಷ್ಣ ರಸ್ತೆ, ದೇಸಾಯಿ ನರ್ಸಿಂಗ್ ಹೋಂ ಬಳಿ
83. ಶೇಷಾದ್ರಿಪುರಂ ನಾರ್ಥ್ ಪಾರ್ಕ್ ರಸ್ತೆ, ಗೌರ್ನಮೆಂಟ್ ಪ್ರೈಮರಿ ಹೆಲ್ತ್ ಯೂನಿಟ್ ಬಳಿ
84. ಆನಂದರಾವ್ ಸರ್ಕಲ್ ಡೈರೆಕ್ಟರ್ ಫಾರ್ ಹೆಲ್ತ್ ಅಂಡ್ ಫ್ಯಾಮಿಲಿ ಹೆಲ್ತ್ ಸೆಂಟರ್
85. ಶೇಷಾದ್ರಿಪುರಂ ಸಿರೂರ್ ಪಾರ್ಕ್ ರಸ್ತೆ, ಲಯನ್ಸ್ ಆಸ್ಪತ್ರೆ ಬಳಿ
86. ಶೇಷಾದ್ರಿಪುರಂ ಲಿಂಕ್ ರಸ್ತೆ, ಮಾರುತಿ ನರ್ಸಿಂಗ್ ಹೋಂ ಬಳಿ
87. ಶೇಷಾದ್ರಿಪುರಂ 2ನೇ ಮುಖ್ಯ ರಸ್ತೆ, ಲಕ್ಷ್ಮಿ ನರ್ಸಿಂಗ್ ಹೋಂ ಬಳಿ
88. ಶೇಷಾದ್ರಿಪುರಂ 4ನೇ ಕ್ರಾಸ್, ಜಯಶ್ರೀ ನರ್ಸಿಂಗ್ ಹೋಂ ಬಳಿ
89. ಶೇಷಾದ್ರಿಪುರಂ ನಂ.3, ಪಿ.ಎಫ್. ರಸ್ತೆ ಭಗವಾನ್ ಮಹಾವೀರ್ ಜೈನ್ ಆಸ್ಪತ್ರೆ ಬಳಿ
90. ಸಹಕಾರಿ ನಗರ ನಾರ್ಥ್ ಸೈಡ್ ಆಸ್ಪತ್ರೆ ಬಳಿ

**ಪೂಜಾ ಮಂದಿರ**

1. ಬುಲ್ ಟೆಂಪಲ್ ರಸ್ತೆ, ರಾಮಕೃಷ್ಣ ಆಶ್ರಮದ ಬಳಿ
2. ಮತ್ತೀಕೆರೆ ಮಸೀದಿ ಬಳಿ
3. ಬಜಾರ್ ಸರ್ಕಲ್ ಮಸೀದಿ ಬಳಿ
4. ಓ.ಟಿ.ಸಿ. ರಸ್ತೆಯಲ್ಲಿನ ತವಕ್ಕಲ್ ಮಸ್ತಾನ್ ದರ್ಗಾ ಮತ್ತು ಮಸೀದಿ ಬಳಿ
5. ಲಾಲ್‌ಬಾಗ್ ಫೋರ್ಟ್ ರಸ್ತೆಯಲ್ಲಿನ ಮಸೀದಿ ಬಳಿ

**ಶಾಲಾ ಕಾಲೇಜುಗಳ ವಿವರ**

1. ನ್ಯೂ ಹಾರಿಜನ್ ಸ್ಕೂಲ್, ಇಂದಿರಾನಗರ 100 ಅಡಿ ರಸ್ತೆ
2. ಸಿ.ಎನ್.ಕೆ ಡೆಂಟಲ್ ಕಾಲೇಜ್, ಇಂದಿರಾನಗರ ಜೋಡಿ ರಸ್ತೆ
3. ಕಾವೇರಿ ಸ್ಕೂಲ್, ಇಂದಿರಾನಗರ ಜೋಡಿ ರಸ್ತೆ
4. ಎಸ್.ಎಸ್.ಬಿ ಸ್ಕೂಲ್, ಇಂದಿರಾನಗರ 6ನೇ ಮುಖ್ಯ ರಸ್ತೆ
5. ಡಾ: ಅಂಬೇಡ್ಕರ್ ಕಾಲೇಜ್, 7ನೇ ಮುಖ್ಯ ರಸ್ತೆ, ಇಂದಿರಾನಗರ
6. ಕೇರಳ ಸ್ಕೂಲ್, 5ನೇ ಮುಖ್ಯ ರಸ್ತೆ, ಇಂದಿರಾನಗರ
7. ಕೇಂಬ್ರಿಡ್ಜ್ ಸ್ಕೂಲ್, ಜೆ.ಬಿ.ನಗರ ಮುಖ್ಯರಸ್ತೆ
8. ಮಿರಂಡ ಸ್ಕೂಲ್, ಜೆ.ಬಿ. ನಗರ ಮುಖ್ಯರಸ್ತೆ
9. ನ್ಯಾಷನಲ್ ಪಬ್ಲಿಕ್ ಸ್ಕೂಲ್, 80 ಅಡಿರಸ್ತೆ
10. ಪೂರ್ಣಪ್ರಜ್ಞ ಸ್ಕೂಲ್, ಸುರಂಜನ್‌ದಾಸ್ ರಸ್ತೆ
11. ಸೆಂಟ್ ಮೇರಿಸ್ ಸ್ಕೂಲ್, ಸುರಂಜನ್ ದಾಸ್ ರಸ್ತೆ
12. ಹೆಚ್.ಎ.ಎಲ್ ಸ್ಕೂಲ್, ಸುರಂಜನ್ ದಾಸ್ ರಸ್ತೆ
13. ಶ್ರೀ ಮುನಿಚೆನ್ನಪ್ಪ ಮಾದರಿ ಪ್ರಾಥಮಿಕ ಪಾಠಶಾಲೆ ಹೊಸೂರು ಲಷ್ಕರ್ ರಸ್ತೆ, ಆಡುಗೋಡಿ
14. ಕಾರ್ಪೋರೇಷನ್ ಬಾಲಕಿಯರ ಪ್ರೌಢಶಾಲೆ, ಹೊಸೂರು ಲಷ್ಕರ್ ರಸ್ತೆ, ಆಡುಗೋಡಿ
15. ಬೇಶಾನಿ ಪ್ರಾಥಮಿಕ ಮತ್ತು ಹೈಸ್ಕೂಲ್, ಕೋರಮಂಗಲ ಪೋಲೀಸ್ ಸ್ಟೇಷನ್ ರಸ್ತೆ, 80 ಅಡಿ ರಸ್ತೆ, ಕೋರಮಂಗಲ

16. ಸರ್ಜಾಪುರ ಪ್ರಾಥಮಿಕ ಮಾದರಿ ಶಾಲೆ, ಜಕ್ಕಸಂದ್ರ, ಸರ್ಜಾಪುರ ರಸ್ತೆ, ಬೆಂಗಳೂರು ನಗರ
17. ಹೊಂಬೇಗೌಡ ಬಾಲಕರ ಮತ್ತು ಬಾಲಕಿಯರ ಪ್ರೌಢಶಾಲೆ, 10ನೇ ಕ್ರಾಸ್, ವಿಲ್ಸನ್ ಗಾರ್ಡನ್,
18. ಕೇಂದ್ರೀಯ ವಿದ್ಯಾಲಯ, ಸರ್ ಸಿ.ವಿ. ರಾಮನ್ ರಸ್ತೆಯಲ್ಲಿ ಮೇಕ್ರಿ ವೃತ್ತದಿಂದ ಸದಾಶಿವನಗರ ಪೊಲೀಸ್ ಠಾಣೆ ವೃತ್ತದವರೆಗೆ.
19. ಏರ್‌ಪೋರ್ಸ್ ಶಾಲೆ ಸರ್ ಸಿ.ವಿ. ರಾಮನ್ ರಸ್ತೆಯಲ್ಲಿ ಮೇಕ್ರಿ ವೃತ್ತದಿಂದ ಸದಾಶಿವನಗರ ಪೊಲೀಸ್ ಠಾಣೆ ವೃತ್ತದವರೆಗೆ.
20. ಪೂರ್ಣಪ್ರಜ್ಞ ಎಜುಕೇಷನ್ ಸೆಂಟರ್ 4ನೇ ಮೈನ್ ಹಾಗೂ 5ನೇ ಮೈನ್, ಸದಾಶಿವನಗರ ರಸ್ತೆ.
21. ಸ್ಟೆಲ್ಲಾ ಮೇರೀಸ್ ಶಾಲೆ, 16ನೇ ಕ್ರಾಸ್, ಗಾಯತ್ರಿದೇವಿ ಪಾರ್ಕ್ ರಸ್ತೆ, ವೈಯಾಲಿಕಾವಲ್ 2ನೇ ಮೈನ್‌ನಿಂದ 1ನೇ ಟೆಂಪಲ್ ರಸ್ತೆ ಜಂಕ್ಷನ್ ವರೆಗೆ ಹಾಗೂ
22. ತಿರುಮಲ ತಿರುಪತಿ ವಿದ್ಯಾಸಂಸ್ಥೆ 16ನೇ ಕ್ರಾಸ್, ಗಾಯತ್ರಿದೇವಿ ಪಾರ್ಕ್ ರಸ್ತೆ, ವೈಯಾಲಿಕಾವಲ್ 2ನೇ ಮೈನ್‌ನಿಂದ 1ನೇ ಟೆಂಪಲ್ ರಸ್ತೆ ಜಂಕ್ಷನ್ ವರೆಗೆ ಹಾಗೂ ಟಿ.ಚೌಡಯ್ಯ ರಸ್ತೆಯಲ್ಲಿ ಭಾಷ್ಯಂ ವೃತ್ತದಿಂದ ಮಲ್ಲೇಶ್ವರಂ 18ನೇ ಕ್ರಾಸ್‌ವರೆಗೆ.
23. ವೈಯಾಲಿಕಾವಲ್ ವಿದ್ಯಾ ಸಂಸ್ಥೆ 16ನೇ ಕ್ರಾಸ್, ಗಾಯತ್ರಿದೇವಿ ಪಾರ್ಕ್ ರಸ್ತೆ, ವೈಯಾಲಿಕಾವಲ್ 2ನೇ ಮೈನ್‌ನಿಂದ 1ನೇ ಟೆಂಪಲ್ ರಸ್ತೆ ಜಂಕ್ಷನ್ ವರೆಗೆ ಹಾಗೂ ಟಿ.ಚೌಡಯ್ಯ ರಸ್ತೆಯಲ್ಲಿ ಭಾಷ್ಯಂ ವೃತ್ತದಿಂದ ಮಲ್ಲೇಶ್ವರಂ 18ನೇ ಕ್ರಾಸ್‌ವರೆಗೆ.
24. ಸರ್ಕಾರಿ ಪಾಠಶಾಲೆ ರಂಗಮಂದಿರದ ಹಿಂಭಾಗ, 2ನೇ ಮೈನ್, ಪಿ.ಜಿ ಹಳ್ಳಿಯಿಂದ ಟಿ. ಚೌಡಯ್ಯ ರಸ್ತೆ ಜಂಕ್ಷನ್‌ವರೆಗೆ
25. ಮಹಾನಗರ ಪಾಲಿಕೆ ಹೈಸ್ಕೂಲ್, ಕೋದಂಡರಾಮಪುರ, ಕೋದಂಡರಾಮಪುರ ಮುಖ್ಯ ರಸ್ತೆ ಹಾಗೂ ಟೆಂಪಲ್ ರಸ್ತೆಯಲ್ಲಿ
26. ಶ್ರೀ ರಾಮಕೃಷ್ಣಶಾಲೆ ಜಿ. ಬೀದಿ, ಅಲಸೂರು
27. ಕಾರ್ಪೋರೇಷನ್ ಬಾಲಕಿಯರ ಪ್ರೌಢಶಾಲೆ, ಜಿ. ಬೀದಿ, ಅಲಸೂರು
28. ಕಾರ್ಪೋರೇಷನ್ ಬಾಲಕರ ಪ್ರೌಢಶಾಲೆ, ಜಿ. ಬೀದಿ, ಅಲಸೂರು
29. ಮಂಟೇಶ್ವರಿ ಶಾಲೆ, ಬಜಾರ್ ರಸ್ತೆ, ಅಲಸೂರು
30. ಆರ್.ಬಿ.ಎನ್.ಎಂ.ಎಸ್ ಶಾಲೆ, ಬಜಾರ್ ಸ್ಟ್ರೀಟ್, ಅಲಸೂರು
31. ಸೆಂಟ್ ಜಾನ್ಸ್ ಶಾಲೆ, ಕೇಂಬ್ರಿಡ್ಜ್ ರಸ್ತೆ, ಅಲಸೂರು
32. ಕೇರಳ ಸಮಾಜ, ಕಾರ್ ಬೀದಿ, ಅಲಸೂರು
33. ಶ್ರೀಮತಿ ಇಂದಿರಾಗಾಂಧಿ ಶಾಲೆ, ಜಿ. ಸ್ಟ್ರೀಟ್, ಅಲಸೂರು
34. ಲೂರ್ದು ಶಾಲೆ, ಕೇಂಬ್ರಿಡ್ಜ್ ರಸ್ತೆ, ಅಲಸೂರು
35. ಫ್ರಾಂಕ್ ಆಂಥೋಣಿ ಶಾಲೆ, ಕೇಂಬ್ರಿಡ್ಜ್ ರಸ್ತೆ, ಅಲಸೂರು
36. ಈಸ್ಟ್‌ವುಡ್ ಶಾಲೆ, ಕೇಂಬ್ರಿಡ್ಜ್ ರಸ್ತೆ, ಅಲಸೂರು
37. ಸೆಂಟ್ ಮೀರಾ ಶಾಲೆ, ಅಲಸೂರು
38. ಬಾಪೂಜಿ ನರ್ಸರಿ ಶಾಲೆ, ಜಿ. ಸ್ಟ್ರೀಟ್, ಅಲಸೂರು
39. ರಾಮಕೃಷ್ಣ ಶಾಲೆ, ಲಿಂಗಯ್ಯಪಾಳ್ಯ, ಅಲಸೂರು
40. ಮಾಂಟಿಸರಿ ಶಾಲೆ, ಆರ್ಟಿಲರಿ ಶಾಲೆ, ಅಲಸೂರು
41. 515 ಆರ್ಮಿ ವರ್ಕ್‌ಶಾಪ್ ಯೂನಿಟಿ ಶಾಲೆ, ಆರ್ಟಿಲರಿ ರಸ್ತೆ, ಅಲಸೂರು
42. ಯೋಗೇಶ್ವರಾನಂದ ಶಾಲೆ, ಆರ್.ಕೆ. ಮಠ್ ರಸ್ತೆ, ಅಲಸೂರು
43. ಕಾರ್ಪೋರೇಷನ್ ಶಾಲೆ, ಮರ್ಫಿಟೌನ್, ಅಲಸೂರು
44. ಕಾರ್ಪೋರೇಷನ್ ಬಾಲಕರ ಮತ್ತು ಬಾಲಕಿಯರ ಪ್ರೈಮರಿ ಶಾಲೆ, ಅಲಸೂರು
45. ಸರ್ಕಾರಿ ಪ್ರೈಮರಿ ಶಾಲೆ, ದೊಮ್ಮಲೂರು, ಹೆಚ್.ಎ.ಎಲ್ ರಸ್ತೆ
46. ಸರ್ಕಾರಿ ವಿಜ್ಞಾನ ಕಾಲೇಜ್, ನೃಪತುಂಗ ರಸ್ತೆ
47. ಇಂಜಿನಿಯರಿಂಗ್ ಕಾಲೇಜ್, ಹಳೇ ಅಂಚೆ ಕಛೇರಿ ರಸ್ತೆ
47. ಸರ್ಕಾರಿ ಕಲಾ ಕಾಲೇಜ್, ಹಳೇ ಅಂಚೆ ಕಚೇರಿ ರಸ್ತೆ
49. ಯುನೈಟೆಡ್ ಮಿಷನ್ ಪ್ರೌಢಶಾಲೆ, ಪಿ. ಕಾಳಿಂಗರಾವ್ ರಸ್ತೆ
50. ಮಿತ್ರಾಲಯ ಪ್ರೌಢಶಾಲೆ ಪಿ. ಕಾಳಿಂಗರಾವ್ ರಸ್ತೆ

51. ಚೆನ್ನಮ್ಮ ಮೆಮೋರಿಯಲ್ ಶಾಲೆ, ಪಿ. ಕಾಳಿಂಗರಾವ್ ರಸ್ತೆ
52. ಸರ್ಕಾರಿ ಫಾರ್ಮಸಿ ಕಾಲೇಜ್, ಪಿ. ಕಾಳಿಂಗರಾವ್ ರಸ್ತೆ
53. ಕೇಂಬ್ರಿಡ್ಜ್ ಶಾಲೆ, ಪಿ. ಕಾಳಿಂಗರಾವ್ ರಸ್ತೆ
54. ವಿನಾಯಕ ವಿದ್ಯಾಶಾಲೆ, ಕೆಂಪೇಗೌಡ ರಸ್ತೆ
55. ಸರ್ಕಾರಿ ಪ್ರೌಢಶಾಲೆ, ಕೆಂಪೇಗೌಡ ರಸ್ತೆ
56. ಸೆಂಟ್ ಜೋಸೆಫ್ ಇಂಡಿಯನ್ ಹೈಸ್ಕೂಲ್, ವಿಠಲ್ ಮಲ್ಯ ರಸ್ತೆ
57. ಸರ್ಕಾರಿ ಹುಡುಗಿಯರ ಪ್ರೌಢಶಾಲೆ, ಕಬ್ಬನ್‌ಪೇಟೆ ಮುಖ್ಯ ರಸ್ತೆ
58. ಮೈಸ್ಕೂಲ್, ಲಾಲ್‌ಬಾಗ್ ರಸ್ತೆ
59. ಉರ್ದು ಶಾಲೆ, ಲಾಲ್‌ಭಾಗ್ ರಸ್ತೆ
60. ದೇವಾಂಗ ನರ್ಸರಿ ಶಾಲೆ ದೇವಾಂಗ ಹಾಸ್ಟೆಲ್ ರಸ್ತೆ
61. ಸೆಂಟ್ರಲ್ ಕಾಲೇಜ್, ಹಳೇ ಅಂಚೆ ಕಛೇರಿ ರಸ್ತೆ
62. ಬಿಷಪ್ ಕಾಟನ್ ಕಾಲೇಜ್ ಪಿ. ಕಾಳಿಂಗರಾವ್ ರಸ್ತೆ
63. ಅಬ್ಬಾಸ್‌ಖಾನ್ ಕಾಲೇಜ್, ಓ.ಟಿ.ಸಿ ರಸ್ತೆ
64. ಸೆಂಟ್ರಲ್ ಕಾಲೇಜ್, ಹಳೇ ಅಂಚೆ ಕಛೇರಿ ರಸ್ತೆ
65. ಬಿಷಪ್ ಕಾಟನ್ ಬಾಯ್ಸ್ ಅಂಡ್ ಗರ್ಲ್ಸ್ ಹೈಸ್ಕೂಲ್, ಸೆಂಟ್ ಮಾರ್ಕ್ಸ್ ರಸ್ತೆ
66. ರ್ವೆಸೊ ಮೆಮೋರಿಯಲ್ ಸ್ಕೂಲ್, ಸೆಂಟ್ ಮಾರ್ಕ್ಸ್ ರಸ್ತೆ
67. ಸೆಂಟ್ ಜೋಸೆಫ್ ಕಾಲೇಜ್, ಮದ್ರಾಸ್ ಬೋರ್ ಬಂಕ್ ರಸ್ತೆ
68. ಸೆಂಟ್ ಜೋಸೆಫ್ ಯುರೋಪಿಯನ್ ಸ್ಕೂಲ್, ಮದ್ರಾಸ್ ಬೋರ್ ಬಂಕ್ ರಸ್ತೆ
69. ವಿಶ್ವೇಶ್ವರಯ್ಯ ಕಾಂಪೋಸಿಟ್ ಕಾಲೇಜ್, ಏರ್‌ಪೋರ್ಟ್ ರಸ್ತೆ
70. ಸೆವೆಂತ್ ಡೇ ಆಡ್ವೆಂಟಿಸ್ಟ್ ಶಾಲೆ
71. ಕ್ಲಾರೆನ್ಸ್ ಸ್ಕೂಲ್, ಪಾಟರೀ ರಸ್ತೆ
72. ಪ್ಲಾರೆನ್ಸ್ ಸ್ಕೂಲ್, ವಿವಿಯಾನಿ ರಸ್ತೆ
73. ಎಸ್.ಡಿ.ಎ ಶಾಲೆ, ಸ್ಪೆನ್ಸರ್ ರಸ್ತೆ
74. ನಿರ್ಮಲಾ ಹಾಗೂ ಚಾರ್ಲ್ಸ್ ಸ್ಕೂಲುಗಳು, ಲಿಂಗರಾಜುಪುರ ರಸ್ತೆ
75. ಜ್ಯೋತಿ ಶಾಲೆ, ನೆಹರೂ ರಸ್ತೆ
76. ಈಸ್ಟ್ ಪಾಯಿಂಟ್ ಶಾಲೆ, 80 ಅಡಿ ರಸ್ತೆ, ಬಾಣಸವಾಡಿ
77. ಪಟೇಲ್ ಶಾಲೆ, 80 ಅಡಿ ರಸ್ತೆ, ಬಾಣಸವಾಡಿ
78. ಸರ್ಕಾರಿ ಶಾಲೆ, ಬಾಣಸವಾಡಿ ರಸ್ತೆ
79. ಆರ್ಮಿ ಸ್ಕೂಲ್, ಕಾಮರಾಜ ರಸ್ತೆ
80. ಕಾರ್ಪೊರೇಷನ್ ಹೈಸ್ಕೂಲ್ ಶಿವಾಜಿ ರಸ್ತೆ
81. ಟೆನ್‌ಬ್ರಿಡ್ಜ್ ಸ್ಕೂಲ್ ಇನ್‌ಫೆಂಟ್ರಿ ರಸ್ತೆ
82. ಟ್ಯಾಗೂರ್ ಮಾಂಟೆಸರಿ ಸ್ಕೂಲ್ ಸೆಂಟ್ ಜಾನ್ಸ್ ರಸ್ತೆ
83. ಕಾರ್ಪೊರೇಷನ್ ಹೈಸ್ಕೂಲ್ ಮತ್ತು ಕಾಲೇಜ್ ಡಿಸ್ಪೆನ್ಸರಿ ರಸ್ತೆ
84. ಸೆಂಟ್ ಕ್ಸೇವಿಯರ್ ಹೈಸ್ಕೂಲ್ ಓಲ್ಡ್ ಸಿಮೆಂಟ್ ರಸ್ತೆ
85. ಆರ್.ಬಿ.ಎ.ಎನ್.ಎಂ.ಎಸ್ ಜ್ಯೂನಿಯರ್ ಕಾಲೇಜ್ ಎ.ಎಸ್.ಎಂ ರಸ್ತೆ
86. ಸೆಂಟ್ ರಾಕ್ ಗರ್ಲ್ಸ್ ಮಿಡಲ್ ಸ್ಕೂಲ್ ಸೆಂಟ್ ಜಾನ್ಸ್ ಚರ್ಚ್ ರಸ್ತೆ
87. ಸೆಂಟ್ ಜರ್ಮನ್ ಹೈಸ್ಕೂಲ್ ಪ್ರಾಮಿನೆಡೆ ರಸ್ತೆ
88. ಸೆಂಟ್ ಜಾನ್ಸ್ ಹೈಸ್ಕೂಲ್ ಪ್ರಾಮಿನೆಡೆ ರಸ್ತೆ
89. ಬಿ.ಎಂ. ಇಂಗ್ಲೀಷ್ ಹೈಸ್ಕೂಲ್ ಸೆಂಟ್ ಜಾನ್ಸ್ ರಸ್ತೆ
90. ಕೇಂದ್ರೀಯ ವಿದ್ಯಾಲಯ, ಎಂ.ಇ.ಜಿ ಸೆಂಟರ್ ಸೆಂಟ್ ಜಾನ್ಸ್ ಚರ್ಚ್ ರಸ್ತೆ
91. ಮೇರಿಲ್ಯಾಂಡ್ ಹೈಸ್ಕೂಲ್ ಆಸ್ಸಾನ್ ರಸ್ತೆ
92. ಸೆಂಟ್ ಅಲಾಷಿಯಸ್ ಹೈಸ್ಕೂಲ್ ಸೆಂಟ್ ಜಾನ್ಸ್ ಚರ್ಚ್ ರಸ್ತೆ
93. ಬಾಲ್ಡ್ವಿನ್ ಶಾಲೆ ಬಾಣಸವಾಡಿ ಮುಖ್ಯ ರಸ್ತೆ
94. ಲೌರಿ ಸ್ಕೂಲ್ ವೈಟ್‌ಫೀಲ್ಡ್ ರಸ್ತೆ

95. ಭಾರತೀಯ ವಿದ್ಯಾನಿಕೇತನ್ ಸ್ಕೂಲ್ ದೇವಸಂದ್ರ ಮುಖ್ಯ ರಸ್ತೆ
96. ಸರ್ಕಾರಿ ಶಾಲೆ ದೇವಸಂದ್ರ ಮುಖ್ಯ ರಸ್ತೆ, ಚಿಕ್ಕ ದೇವಸಂದ್ರ,
97. ಬಿಷಪ್ ಕಾಟನ್ ಬಾಯ್ಸ್ ಹೈಸ್ಕೂಲ್ ರೆಸಿಡೆನ್ಸಿ ರಸ್ತೆ,
98. ಸೆಂಟ್ ಆಂತೋಣಿ ಬಾಯ್ಸ್ ಸ್ಕೂಲ್ ಕಾನ್ವೆಂಟ್ ರಸ್ತೆ
99. ಸೆಕ್ರೇಡ್ ಹಾರ್ಟ್ ಗರ್ಲ್ಸ್ ಹೈಸ್ಕೂಲ್ ರೆಸಿಡೆನ್ಸಿ ರಸ್ತೆ
100. ಸೆಂಟ್ ಆಂಗ್ನೇಸ್ ಪ್ರೈಮರಿ ಶಾಲೆ ಮ್ಯೂಸಿಯಂ ರಸ್ತೆ
101. ಸೆಂಟ್ ಇಪ್ರಿಷಿಯಸ್ ಗರ್ಲ್ಸ್ ಹೈಸ್ಕೂಲ್ ಆಲ್ಬರ್ಟ್ ಸ್ಟ್ರೀಟ್
102. ಬಾಲ್ಡ್ವಿನ್ ಬಾಯ್ಸ್ ಹೈಸ್ಕೂಲ್ ಹೊಸೂರು ರಸ್ತೆ
103. ಬಾಲ್ಡ್ವಿನ್ ಬಾಲಕಿಯರ ಶಾಲೆ ರಿಚ್‌ಮಂಡ್ ರಸ್ತೆ,
104. ಕ್ಯಾಥೆಡ್ರಿಲ್ ಹೈಸ್ಕೂಲ್ ರಿಚ್‌ಮಂಡ್ ರಸ್ತೆ
105. ಅವರ್ ಲೇಡಿ ಗರ್ಲ್ಸ್ ಸ್ಕೂಲ್ ಕ್ಯಾಂಪ್‌ಬೆಲ್ ರಸ್ತೆ
106. ಕೇಂದ್ರೀಯ ವಿದ್ಯಾಲಯ ವಿಕ್ಟೋರಿಯಾ ರಸ್ತೆ
107. ಸೆಂಟ್ ಜೋಸೆಫ್ ಕಾಮರ್ಸ್ ಕಾಲೇಜ್ ಬ್ರಿಗೇಡ್ ರಸ್ತೆ
108. ಕರ್ನಾಟಕ ವಿದ್ಯಾ ಸಂಘ ಶಾಲೆ ಆಸ್ಟಿನ್‌ಟೌನ್
109. ಇಮಾಮಿಯಾ ಇಂಗ್ಲೀಷ್ ಹೈಸ್ಕೂಲ್ ರಿಚ್‌ಮಂಡ್ ರಸ್ತೆ,
110. ಪ್ರಾಂಕ್ ಆಂತೋಣಿ ಹೈಸ್ಕೂಲ್ ವೆಲ್ಲಿಂಗ್‌ಟನ್ ರಸ್ತೆ
111. ಗುಡ್ ಶೆಪರ್ಡ್ ಕಾನ್ವೆಂಟ್ ಶಾಲೆ ಮ್ಯೂಸಿಯಂ ರಸ್ತೆ
112. ಸೆಂಟ್ ಪ್ಯಾಟ್ರಿಕ್ಸ್ ಹೈಸ್ಕೂಲ್ ಬ್ರಿಗೇಡ್ ರಸ್ತೆ
113. ಸೆಂಟ್ ಜೋಸೆಫ್ ವಿಜ್ಞಾನ ಕಾಲೇಜ್ ಲಾಂಗ್‌ಪೋರ್ಡ್ ರಸ್ತೆ
114. ಬೈಬಲ್ ಕಾಲೇಜ್ ನಂ.72, ವೆಲ್ಲಿಂಗ್‌ಟನ್ ಸ್ಟ್ರೀಟ್
115. ಧನರಾಜ್ ಪೂಲ್‌ಚಂದ್ ಹಿಂದಿ ಶಾಲೆ
116. ಸೆಂಟ್ ಜೋಸೆಫ್ ಆರ್ಟ್ಸ್ ಕಾಲೇಜ್ ರೆಸಿಡೆನ್ಸಿ ರಸ್ತೆ
117. ಬಿಷಪ್ ಕಾಟನ್ ಗರ್ಲ್ಸ್ ಸ್ಕೂಲ್ ಮುಖ್ಯದ್ವಾರ ಸೆಂಟ್ ಮಾರ್ಕ್ಸ್ ರಸ್ತೆ ಮತ್ತು ಹಿಂಬದಿ ಗೇಟ್ ರೆಸಿಡೆನ್ಸಿ ರಸ್ತೆ)
118. ಬಿ.ಎಂ.ಪಿ ಬಾಲಕಿಯರ ಪ್ರೌಢಶಾಲೆ ಓ.ಆರ್.ಸಿ ರಸ್ತೆ, ಬೆಂಗಳೂರು
119. ಜವಹರಲಾಲ್ ಎಜುಕೇಷನ್ ಟ್ರಸ್ಟ್ 3ನೇ ಮುಖ್ಯ ರಸ್ತೆ, ವಿವೇಕನಗರ
120. ಶಾಂತಿನಿಕೇತನ ಹೈಸ್ಕೂಲ್ 8ನೇ ಅಡ್ಡ ರಸ್ತೆ, ಆಂಧ್ರ ಕಾಲೋನಿ, ವಿವೇಕನಗರ
121. ಮಹಾನಗರ ಪಾಲಿಕೆ ಬಾಲಕರ ಪ್ರೌಢಶಾಲೆ ಬಿ.ಡಿ.ಎ, ಆಸ್ಟಿನ್‌ಟೌನ್
122. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಈಜಿಪುರ,
123. ಸುಂದರಿ ಮೆಮೋರಿಯಲ್ ಸ್ಕೂಲ್ ಈಜಿಪುರ ರಸ್ತೆ
124. ಸರ್ಕಾರಿ ಶಾಲೆ, ಮಡಿವಾಳ ಸಂತೆಬೀದಿ
125. ಚೆನ್ನಕೇಶವನಗರ ಪ್ರೌಢಶಾಲೆ ಹೊಸರಸ್ತೆ, ಚೆನ್ನಕೇಶವನಗರ
126. ಕ್ಯಾಮೆಲ್ ಕಾನ್ವೆಂಟ್ ಈಸ್ಟ್ ಎಂಡ್ ರಸ್ತೆ
127. ಗಾಂಧಿನಗರ ಹೈಯರ್ ಸೆಕೆಂಡರಿ ಸ್ಕೂಲ್ ಕುಮಾರಪಾರ್ಕ್ ವೆಸ್ಟ್ ಎಕ್ಸ್‌ಟೆನ್‌ಷನ್, ಬೆಂಗಳೂರು
128. ವಿ.ಕೆ.ಎನ್ ಇಂಗ್ಲೀಷ್ ಹೈಸ್ಕೂಲ್, ನೆಹರುನಗರ,
129. ಜ್ಞಾನ ಭೋದಿನಿ ಸ್ಕೂಲ್ ಶಿರೂರ್ ಪಾರ್ಕ್ ರಸ್ತೆ, ಶೇಷಾದ್ರಿಪುರಂ
130. ಮಹಿಳಾ ವಿದ್ಯಾಲಯ ಹೈಸ್ಕೂಲ್ ಶೇಷಾದ್ರಿಪುರಂ
131. ಬೆತೆಸ್ಡ ಹೈಸ್ಕೂಲ್ 51, ಕುಮಾರಪಾರ್ಕ್ ವೆಸ್ಟ್
132. ಗೌರ್‍ನಮೆಂಟ್ ಗರ್ಲ್ಸ್ ಹೈಸ್ಕೂಲ್ ಲಿಂಕ್ ರಸ್ತೆ, ಶೇಷಾದ್ರಿಪುರಂ
133. ದೀನಸೇವಾ ಸಂಘ ಪ್ರೈಮರಿ ಸ್ಕೂಲ್ ರಿಸೆಲ್ದಾರ್ ಸ್ಟ್ರೀಟ್, ಶೇಷಾದ್ರಿಪುರಂ
134. ಶೇಷಾದ್ರಿಪುರಂ ಹೈಸ್ಕೂಲ್, ನಾಗಪ್ಪ ಸ್ಟ್ರೀಟ್, ಶೇಷಾದ್ರಿಪುರಂ
135. ಉರ್ದು ಪ್ರೈಮರಿ ಸ್ಕೂಲ್ ಸೌತ್‌ಪಾರ್ಕ್ ರಸ್ತೆ, ಶೇಷಾದ್ರಿಪುರಂ
136. ಸೋಫಿಯಾ ಸ್ಕೂಲ್ ಪ್ಯಾಲೇಸ್ ರಸ್ತೆ, ಹೈಗ್ರೌಂಡ್ಸ್
137. ಸೆಂಟ್ ಆನ್ಸ್ ಸ್ಕೂಲ್ ಮಿಲ್ಲರ್ ರಸ್ತೆ

138. ಸಿಂಧಿ ಸ್ಕೂಲ್ ಕುಮಾರಕೃಪ ರಸ್ತೆ
139. ಭಾರತ್ ಸೇವಾಧಳ ಸ್ಕೂಲ್ ಕುಮಾರಕೃಪ ರಸ್ತೆ
140. ಮೌಂಟ್ ಕಾರ್ಮೆಲ್ ಕಾಲೇಜ್ ಪ್ಯಾಲೇಸ್ ರಸ್ತೆ
141. ಡಯಾಗನಲ್ ರಸ್ತೆ, ನ್ಯಾಷನಲ್ ಕಾಲೇಜ್ ವೃತ್ತದಿಂದ ಸಜ್ಜನ್‌ರಾವ್ ವೃತ್ತದವರೆಗೆ
142. ವಾಸವಿ ವಿದ್ಯಾ ಮಂದಿರದ ಬಳಿ
143. ಸರಸ್ವತಿ ವಿದ್ಯಾಮಂದಿರ ಬಳಿ
144. ಎಂ.ಎನ್.ಕೆ. ಪಾರ್ಕ್ ಹೋಂ ಸ್ಕೂಲ್ ಬಳಿ
145. ಎಂ.ಎನ್.ಕೆ ಪಾರ್ಕ್ ರಸ್ತೆ, ನ್ಯೂ ಜೆನರೇಷನ್ ಸ್ಕೂಲ್ ಬಳಿ
146. ಸೌತ್ ಎಂಡ್ ರಸ್ತೆ, ಕಮಲಾನೆಹರೂ ಸ್ಕೂಲ್ ಬಳಿ
147. ತ್ಯಾಗರಾಜನಗರ ರಸ್ತೆ, ಮಹಿಳಾ ಮಂಡಳಿ ಬಳಿ
148. ತ್ಯಾಗರಾಜನಗರ ರಸ್ತೆ, ಎ.ಪಿ.ಎಸ್. ಕಾಲೇಜ್ ಬಳಿ
149. ಶಂಕರಮಠ ರಸ್ತೆ, ಉಮೆನ್ಸ್ ಫೀಸ್ ಲೇಟ್ ಶಾಲೆ ಬಳಿ
150. ಬುಲ್‌ಟೆಂಪಲ್ ರಸ್ತೆ, ಜ್ಞಾನೋದಯ ವಿದ್ಯಾಲಯದ ಬಳಿ
151. ಚಾಮರಾಜಪೇಟೆ ಶ್ರೀರಾಮ ವಿದ್ಯಾಮಂದಿರದ ಬಳಿ
152. ಟಿ. ಮರಿಯಪ್ಪ ರಸ್ತೆ, ರಾಣಿ ಸರಳಾದೇವಿ ಶಾಲೆಯ ಬಳಿ
153. ಸೌತ್ ಎಂಡ್ ವೃತ್ತದ ವಿಜಯ ಹೈಸ್ಕೂಲ್ ಬಳಿ
154. ಎನ್.ಎಸ್.ವಿ.ಕೆ. ಸ್ಕೂಲ್ 2ನೇ ಮುಖ್ಯ ರಸ್ತೆ, 7ನೇ ಬ್ಲಾಕ್ ಜಯನಗರ ಬಳಿ
155. ಜಯನಗರ 30ನೇ ಕ್ರಾಸ್, ವಿಜಯ ಜೂನಿಯರ್ ಕಾಲೇಜ್ ಬಳಿ
156. ಕಾರ್ಮೆಲ್ ಶಾಲೆಯ ಬಳಿ
157. ಪ್ರಾರ್ಥನಾ ಶಾಲೆಯ ಬಳಿ
158. ಲಿಟಲ್ ಫ್ಲವರ್ ಶಾಲೆಯ ಬಳಿ
159. ಸುಬ್ರಹ್ಮಣ್ಯಪುರ ವೈ.ಎಸ್.ಎಸ್. ಶಾಲೆಯ ಬಳಿ
160. ಇಂಟರ್‌ನ್ಯಾಷನಲ್ ಶಾಲೆಯ ಬಳಿ
161. ಜ್ಯೋತಿ ಕೇಂದ್ರೀಯ ವಿದ್ಯಾಲಯದ ಬಳಿ
162. ಸರ್ಕಾರಿ ಶಾಲೆ ಜರುಗನಹಳ್ಳಿ ಬಳಿ
163. ಹೋಲಿಸೆಂಟ್ ಶಾಲೆಯ ಬಳಿ
164. ಯಡಿಯೂರು ಸರ್ಕಾರಿ ಮಾದರಿ ಶಾಲೆ ಬಳಿ
165. ಬನಶಂಕರಿ 2ನೇ ಹಂತ ಬಿ.ಎಸ್.ಎಂ. ಹೈಸ್ಕೂಲ್ ಬಳಿ
166. ಕನಕಪುರ ರಸ್ತೆ, ಜೆ.ಎಸ್.ಎಲ್ ವಿದ್ಯಾಸಂಸ್ಥೆ ಬಳಿ
167. ಟಿ.ಆರ್. ನಗರ, ಎಸ್.ಎಸ್.ಎಂ. ಶಾಲೆಯ ಬಳಿ
168. ಸಹಕಾರ ವಿದ್ಯಾ ಕೇಂದ್ರದ ಬಳಿ
169. ಸಂಪಿಗೆ ರಸ್ತೆ ಸಿ.ಇ.ಟಿ. ಸೆಲ್ ಬಳಿ
170. ರಾಜಾಜಿನಗರ 17ನೇ ಮುಖ್ಯ ರಸ್ತೆ ಬಸವೇಶ್ವರ ಶಾಲೆ ಬಳಿ
171. ಜಿ.ಡಿ. ನಾಯ್ಡು ಹಾಲ್ ರಸ್ತೆ, ವಿದ್ಯಾಭಾರತಿ ಶಾಲೆಯ ಬಳಿ
172. ಎಂ.ಎಸ್. ರಾಮಯ್ಯ ರಸ್ತೆ, ಕೇಂದ್ರೀಯ ವಿದ್ಯಾಲಯದ ಬಳಿ
173. ಬಿ.ಇ.ಎಲ್, ಸಿ.ಬಿ.ಎಸ್.ಇ. ಶಾಲೆಯ ಬಳಿ
174. ಬಿ.ಇ.ಎಲ್. ಪ್ರೌಢ ಶಾಲೆಯ ಬಳಿ
175. ಎಸ್.ಎಂ. ರಸ್ತೆ ಕ್ಲೋನಿ ಕಾನ್ವೆಂಟ್ ಶಾಲೆಯ ಬಳಿ
176. ಫಾತಿಮ ಸ್ಕೂಲ್ ಬಳಿ
177. ಹೆಸರಘಟ್ಟ ರಸ್ತೆ, ಬಗಲಗುಂಟೆ ಶಾಲಾ ವಲಯ ಬಳಿ
178. ಲಗ್ಗೆರೆ ಎಂ.ಇ.ಎಸ್. ಶಾಲೆ
179. ಲಗ್ಗೆರೆ, ವೀಣಾ ವಿದ್ಯಾ ಸಂಸ್ಥೆ ಬಳಿ
180. ಹೆಗ್ಗನಹಳ್ಳಿ ಮುಖ್ಯ ರಸ್ತೆ ಪೂರ್ಣಿಮ ಸ್ಕೂಲ್ ಬಳಿ
181. ಪೀಣ್ಯ ವಿಲೇಜ್ ಸರ್ಕಾರಿ ಪ್ರಾಥಮಿಕ ಶಾಲೆಯ ಬಳಿ

182. ಹೆಬ್ಬಾಳ, ಕೆಂಪಾಪುರದ ಪ್ರೆಸಿಡೆನ್ಸಿ ಕಾಲೇಜ್ ಬಳಿ
183. ಹೆಬ್ಬಾಳ, ಕೆಂಪಾಪುರದ ಸಿಂಧಿ ಕಾಲೇಜ್ ಆಫ್ ಕಾಮರ್ಸ್ ಬಳಿ
184. ಹೆಬ್ಬಾಳ, ಕೆಂಪಾಪುರದ ವಿದ್ಯಾನಿಕೇತನ ಶಾಲೆಯ ಬಳಿ
185. ಕೊಡಿಗೇನಹಳ್ಳಿ, ಕೆನಡಿಯನ್ ಸ್ಕೂಲ್ ಆಫ್ ಇಂಡಿಯಾ ಬಳಿ
186. ಆರ್.ಟಿ.ನಗರ ಮುಖ್ಯ ರಸ್ತೆ, ಲಾರೆನ್ಸ್ ಸ್ಕೂಲ್ ಬಳಿ
187. ದಿಣ್ಣೂರು ರಸ್ತೆಯ ಸರ್ವೋದಯ ಸ್ಕೂಲ್ ಬಳಿ
188. ನಂದೀದುರ್ಗ ರಸ್ತೆಯ ಗುಲಾಬಿ ಸ್ಕೂಲ್ ಮುಂದೆ
189. ಗಾಂಧಿನಗರ 2ನೇ ಮುಖ್ಯ ರಸ್ತೆ ಸರ್ಕಾರಿ ಪ್ರೌಢ ಶಾಲೆ ಬಳಿ
190. ಕಿಲಾರಿ ರಸ್ತೆಯ ಭಂಡಾರಿ ಶಾಲೆಯ ಬಳಿ
191. ಡಾ: ರಾಜ್‌ಕುಮಾರ್ ರಸ್ತೆಯಲ್ಲಿನ ಸೇಂಟ್ ಆನ್ಸ್ ಮತ್ತು ಎಸ್.ಜೆ.ಆರ್. ಶಾಲೆ ಬಳಿ
192. ಹೆಗ್ಗನಹಳ್ಳಿ ಮುಖ್ಯ ರಸ್ತೆಯಲ್ಲಿನ ಪ್ರಾಥಮಿಕ ಶಾಲೆಯ ಬಳಿ
193. ಎಂ.ಸಿ. ಬಡಾವಣೆಯಲ್ಲಿನ ನ್ಯೂ ಪಬ್ಲಿಕ್ ಶಾಲೆಯ ಬಳಿ
194. ಪಂತರಪಾಳ್ಯದಲ್ಲಿರುವ ಪ್ರಾಥಮಿಕ ಸರ್ಕಾರಿ ಶಾಲೆಯ ಬಳಿ
195. ಮೈಸೂರು ರಸ್ತೆಯಲ್ಲಿರುವ ಆರ್.ವಿ. ಕಾಲೇಜ್ ಬಳಿ

**ಎಸ್. ಮರಿಸ್ವಾಮಿ**
ಪಿ.ಆರ್.984 **ಪೊಲೀಸ್ ಕಮೀಷನರ್, ಬೆಂಗಳೂರು ನಗರ.**

## ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ: 591/ಸಂವಿ/ಸಿಓಪಿ/2003, ದಿನಾಂಕ: 5ನೇ ಡಿಸೆಂಬರ್, 2003**

ಬೆಂಗಳೂರು ನಗರ ಬಸವನಗುಡಿ ಸಂಚಾರ ವಲಯದಲ್ಲಿ ಹನುಮಂತನಗರ ಬಡಾವಣೆಯ 50 ಅಡಿ ರಸ್ತೆ, 80 ಅಡಿ ರಸ್ತೆ, 4ನೇ ಕ್ರಾಸ್ ರಸ್ತೆ ಮತ್ತು ಕತ್ರಿಗುಪ್ಪೆ ರಸ್ತೆಗಳು ಪ್ರಮುಖ ರಸ್ತೆಗಳಾಗಿದ್ದು, ಅತಿ ಹೆಚ್ಚಿನ ಹಾಗೂ ದಟ್ಟವಾದ ವಾಹನ ಸಂಚಾರವಿರುತ್ತದೆ. ಶ್ರೀನಗರ, ಗಿರಿನಗರ, ಕತ್ರಿಗುಪ್ಪೆ, ಮೈಸೂರು ಬ್ಯಾಂಕ್ ಕಾಲೋನಿ, ಬನಶಂಕರಿ 1ನೇ ಹಂತ ಹಾಗೂ 3ನೇ ಹಂತ ಬಡಾವಣೆಗಳಿಗೆ ಎಲ್ಲಾ ವಾಹನಗಳು, ಕಾರ್ಖಾನೆ ಬಸ್‌ಗಳು, ಬಿ.ಎಂ.ಟಿ.ಸಿ. ಬಸ್‌ಗಳು ಈ ಭಾಗದಲ್ಲಿ ಅತಿ ಹೆಚ್ಚಾಗಿ ಓಡಾಡುತ್ತಿದ್ದು, ಮೊದಲು ದ್ವಿಮುಖ ಸಂಚಾರ ವ್ಯವಸ್ಥೆ ಇದ್ದುದ್ದರಿಂದ ಸದ್ರಿ ರಸ್ತೆಗಳಲ್ಲಿ ವಾಹನಗಳ ಸಂಚಾರ ತುಂಬಾ ಅಧಿಕವಾಗಿ ಸುಗಮ ಸಂಚಾರಕ್ಕೆ ಅಡ್ಡಿವುಂಟಾಗುತ್ತಿತ್ತು.

ಮೇಲ್ಕಂಡ ಕಾರಣಗಳಿಂದ ಸದ್ರಿ ಬಡಾವಣೆಗಳಲ್ಲಿ ವಾಸ ಮಾಡುತ್ತಿರುವ ನಿವಾಸಿಗಳು, ಸಂಘ ಸಂಸ್ಥೆಗಳು, ಪದಾಧಿಕಾರಿಗಳು, ಸಂಚಾರಿ ತಜ್ಞರು ಹಾಗೂ ಹಿರಿಯ ನಾಗರೀಕರುಗಳು ಸುಗಮ ಸಂಚಾರದ ವ್ಯವಸ್ಥೆಗಾಗಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸಲು ಸಲಹೆ ನೀಡಿದ ಮೇರೆಗೆ ಹನುಮಂತನಗರದ 50 ಅಡಿ ರಸ್ತೆಯಲ್ಲಿ, 10ನೇ ಮುಖ್ಯ ರಸ್ತೆ ಹಾಗೂ 4ನೇ ಕ್ರಾಸ್ ರಸ್ತೆಗಳಲ್ಲಿ "ಏಕಮುಖ" ಸಂಚಾರ ವ್ಯವಸ್ಥೆಯನ್ನು ಪ್ರಾಯೋಗಿಕವಾಗಿ ಒಂದು ತಿಂಗಳ ಅವಧಿಗೆ ಅಂದರೆ ದಿನಾಂಕ 2-11-2003ರಿಂದ 1-12-2003 ರ ತನಕ ಜಾರಿಗೆಗೊಳಿಸಲಾಯಿತು.

ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸಿದ ಬಗ್ಗೆ ಹಿರಿಯ ನಾಗರೀಕರು ಸಂಘ ಸಂಸ್ಥೆಗಳು ಹಾಗೂ ಸಾರ್ವಜನಿಕರು ಈಗ ಒಪ್ಪಿಕೊಂಡಿದ್ದು ಸದ್ರಿ ವ್ಯವಸ್ಥೆಯನ್ನು ಖಾಯಂ ಆಗಿ ಮುಂದುವರೆಸಲು ಸಲಹೆ ನೀಡಿರುತ್ತಾರೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಕಲಂ 4, ರಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ಸಂಚಾರ ನಿರ್ಬಂಧವನ್ನು ಜಾರಿಗೊಳಿಸಲು ಆದೇಶಿಸಿರುತ್ತೇನೆ.

ಹನುಮಂತನಗರ 50 ಅಡಿ ರಸ್ತೆಯಲ್ಲಿ ಮೌಂಟ್‌ಜಾಯ್ ಮುಖ್ಯ ರಸ್ತೆ ಜಂಕ್ಷನ್‌ನಿಂದ 10ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ಅಂದರೆ ಪೂರ್ವದಿಂದ ಪಶ್ಚಿಮದ ಕಡೆಗೆ "ಏಕಮುಖ" ಸಂಚಾರದ ವ್ಯವಸ್ಥೆಯನ್ನಾಗಿ ಮಾಡಲಾಗಿದೆ. ಅಂತೆಯೇ 10ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ ಮೌಂಟ್‌ಜಾಯ್ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ಅಂದರೆ ಪಶ್ಚಿಮದಿಂದ ಪೂರ್ವದ ಕಡೆಗೆ ವಾಹನ ಪ್ರವೇಶ ಮತ್ತು ಸಂಚಾರವನ್ನು ನಿರ್ಬಂಧಿಸಿದೆ.

ಹನುಮಂತನಗರ 10ನೇ ಮುಖ್ಯ ರಸ್ತೆ (ಹಳೇ 14ನೇ ಮುಖ್ಯ ರಸ್ತೆ)ಯಲ್ಲಿ 50 ಅಡಿ ರಸ್ತೆ ಜಂಕ್ಷನ್‌ನಿಂದ ಮಾರುತಿ ವೃತ್ತದವರೆಗೆ ಅಂದರೆ ದಕ್ಷಿಣ ದಿಕ್ಕಿನಿಂದ ಉತ್ತರ ದಿಕ್ಕಿನ ಕಡೆಗೆ ಏಕಮುಖ ಸಂಚಾರ ವ್ಯವಸ್ಥೆಯನ್ನಾಗಿ ಕಲ್ಪಿಸಿ ಕೊಡಲಾಗಿದೆ. ಅಂತೆಯೇ ಮಾರುತಿ ವೃತ್ತದಿಂದ 50 ಅಡಿ ರಸ್ತೆ ಕಡೆಗೆ ಅಂದರೆ ಉತ್ತರ ದಿಕ್ಕಿನಿಂದ ದಕ್ಷಿಣ ದಿಕ್ಕಿನ ಕಡೆಗೆ ವಾಹನ ಪ್ರವೇಶ ಮತ್ತು ಸಂಚಾರವನ್ನು ನಿರ್ಬಂಧಿಸಲಾಗಿದೆ.

ಹನುಮಂತನಗರ 4ನೇ ಕ್ರಾಸ್ ರಸ್ತೆಯಲ್ಲಿ ಮಾರುತಿ ವೃತ್ತದಿಂದ ಕಾರ್ಪೋರೇಷನ್ ವಾರ್ಡ್ ಆಫೀಸ್ ಜಂಕ್ಷನ್‌ವರೆಗೆ ಅಂದರೆ ಪಶ್ಚಿಮ ದಿಕ್ಕಿನಿಂದ ಪೂರ್ವ ದಿಕ್ಕಿನ ಕಡೆಗೆ "ಏಕಮುಖ" ಸಂಚಾರ ವ್ಯವಸ್ಥೆಯನ್ನು ಕಲ್ಪಿಸಿ ಕೊಡಲಾಗಿದೆ. ಅಂತೆಯೇ ಕಾರ್ಪೋರೇಷನ್ ವಾರ್ಡ್ ಆಫೀಸ್ ಕಡೆಯಿಂದ ಮಾರುತಿ ವೃತ್ತದವರೆಗೆ ಅಂದರೆ ಪೂರ್ವ ದಿಕ್ಕಿನಿಂದ ಪಶ್ಚಿಮ ದಿಕ್ಕಿನ ಕಡೆಗೆ ವಾಹನಗಳ ಪ್ರವೇಶ ಮತ್ತು ಸಂಚಾರವನ್ನು ನಿರ್ಬಂಧಿಸಲಾಗಿದೆ.

ಮೌಂಟ್‌ಜಾಯ್ ರಸ್ತೆಯಲ್ಲಿ 50 ಅಡಿ ರಸ್ತೆ ಜಂಕ್ಷನ್‌ನಿಂದ 3ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ಅಂದರೆ ಉತ್ತರದಿಂದ ದಕ್ಷಿಣಕ್ಕೆ "ಏಕಮುಖ" ಸಂಚಾರ ವ್ಯವಸ್ಥೆಯನ್ನು ಮಾಡಲಾಗಿದೆ. ಅಂತೆಯೇ ಸದರಿ ವ್ಯವಸ್ಥೆಯಲ್ಲಿ 3ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 50 ಅಡಿ ರಸ್ತೆ ಜಂಕ್ಷನ್‌ವರೆಗೆ ಅಂದರೆ ದಕ್ಷಿಣದಿಂದ ಉತ್ತರಕ್ಕೆ ಎಲ್ಲಾ ವಿಧವಾದ ವಾಹನಗಳ ಪ್ರವೇಶ ಮತ್ತು ಸಂಚಾರವನ್ನು ನಿರ್ಬಂಧಿಸಿದೆ.

3ನೇ ಮುಖ್ಯ ರಸ್ತೆಯಲ್ಲಿ ಮೌಂಟ್‌ಜಾಯ್ ರಸ್ತೆ ಜಂಕ್ಷನ್‌ನಿಂದ ವಿಜಯ ಬ್ಯಾಂಕ್ ರಸ್ತೆ ಜಂಕ್ಷನ್‌ವರೆಗೆ ಅಂದರೆ ದಕ್ಷಿಣದಿಂದ "ಏಕಮುಖ" ಸಂಚಾರ ವ್ಯವಸ್ಥೆಯನ್ನಾಗಿ ಮಾಡಲಾಗಿದೆ. ಅಂತೆಯೇ ಸದರಿ ರಸ್ತೆಯಲ್ಲಿ ವಿಜಯ ಬ್ಯಾಂಕ್‌ನಿಂದ ಮೌಂಟ್‌ಜಾಯ್ ರಸ್ತೆ ಜಂಕ್ಷನ್‌ವರೆಗೆ ಅಂದರೆ ಉತ್ತರದಿಂದ ದಕ್ಷಿಣಕ್ಕೆ ಎಲ್ಲಾ ವಿಧವಾದ ವಾಹನಗಳ ಪ್ರವೇಶ ಮತ್ತು ಸಂಚಾರವನ್ನು ನಿರ್ಬಂಧಿಸಲಾಗಿದೆ.

ಹನುಮಂತನಗರ 50 ಅಡಿ ರಸ್ತೆ ಮತ್ತು 4ನೇ ಕ್ರಾಸ್ ರಸ್ತೆಯಲ್ಲಿ "ಏಕಮುಖ" ಸಂಚಾರ ವ್ಯವಸ್ಥೆಯಿರುವುದರಿಂದ ರಸ್ತೆಯ ಎರಡೂ ಬದಿಗಳಲ್ಲಿ ಸಮ ಮತ್ತು ಬೆಸ ದಿನಗಳಲ್ಲಿ ಒಂದೊಂದು ದಿನ ವಾಹನಗಳ ನಿಲುಗಡೆ ಅವಕಾಶ ಮಾಡಲಾಗಿದೆ.

50 ಅಡಿ ರಸ್ತೆಯಲ್ಲಿ 10ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ ಕೆ.ಆರ್. ಆಸ್ಪತ್ರೆ ಜಂಕ್ಷನ್‌ವರೆವಿಗೆ ದ್ವಿಮುಖ ಸಂಚಾರ ವ್ಯವಸ್ಥೆ ಇರುವುದರಿಂದ ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

10ನೇ ಮುಖ್ಯ ರಸ್ತೆಯಲ್ಲಿ 50 ಅಡಿ ಜಂಕ್ಷನ್‌ನಿಂದ ಮಾರುತಿ ಜಂಕ್ಷನ್ ತನಕ ರಸ್ತೆಯ ಅಗಲ ಕಿರಿದಾಗಿರುವುದರಿಂದ ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಹನುಮಂತನಗರ 3ನೇ ಮುಖ್ಯ ರಸ್ತೆಯಲ್ಲಿ ಮೌಂಟ್‌ಜಾಯ್ ರಸ್ತೆ ಜಂಕ್ಷನ್‌ನಿಂದ ವಿಜಯ ಬ್ಯಾಂಕ್ ಜಂಕ್ಷನ್‌ವರೆಗೆ ಅಧಿಕ ವಾಹನಗಳ ಸಂಚಾರವಿರುವುದರಿಂದ ಮತ್ತು ರಸ್ತೆಯ ಅಗಲ ಕಿರಿದಾಗಿರುವುದರಿಂದ ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ 1988 ಮೋಟಾರು ವಾಹನ ಕಾಯ್ದೆ ಕಲಂ 116 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ಕಲಂ 4, ರಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ಅಗತ್ಯವಿರುವ ಕಡೆ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 05–12–2003ರಿಂದ ರಿಂದ ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಜಾರಿಗೆ ತರಲು ಆದೇಶ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್.985 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ: 51/ ಸಂವಿ/ ಸಿ.ಓ.ಪಿ/ 2004, ದಿನಾಂಕ: 14ನೇ ಫೆಬ್ರವರಿ, 2004**

ಬೆಂಗಳೂರು ನಗರದ ಸಂಚಾರ ಕೇಂದ್ರ ಉಪ ವಿಭಾಗದ ವ್ಯಾಪ್ತಿಯಲ್ಲಿನ ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಇತ್ತೀಚಿಗೆ ಹೆಚ್ಚಿನ ಸಂಚಾರ ಒತ್ತಡ ಉಂಟಾಗಿದ್ದು ಈ ರಸ್ತೆಯಲ್ಲಿ ಸಂಚಾರ ಉದ್ಯಾನವನಕ್ಕೆ ಬರುವ ಶಾಲಾ ಮಕ್ಕಳಿಗೆ ಹಾಗೂ ವಾಹನ ಚಾಲಕರ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗಿರುವುದು ಕಂಡುಬಂದಿರುತ್ತದೆ. ಆದ್ದರಿಂದ ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಲೆವಲಿ ರಸ್ತೆ ಜಂಕ್ಷನ್‌ನಿಂದ ಸೆಂಟ್ ಮಾರ್ಕ್ಸ್ ರಸ್ತೆ ಜಂಕ್ಷನ್ ವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಿ ಸಂಚಾರ ಉದ್ಯಾನವನಕ್ಕೆ ಬರುವ ಶಾಲಾ ಮಕ್ಕಳ ವಾಹನಗಳಿಗೆ ಮದ್ರಾಸ್ ಬ್ಯಾಂಕ್ ರಸ್ತೆಯ ಉತ್ತರ ಭಾಗದಲ್ಲಿ ನಿಲುಗಡೆಗೆ ವ್ಯವಸ್ಥೆ ಮಾಡಿಕೊಡುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ಮದ್ರಾಸ್ ಬ್ಯಾಂಕ್ ರಸ್ತೆಯಲ್ಲಿ ಲೆವಲಿ ರಸ್ತೆ ಜಂಕ್ಷನ್‌ನಿಂದ ಸೆಂಟ್ ಮಾರ್ಕ್ಸ್ ರಸ್ತೆ ಜಂಕ್ಷನ್ ವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ಎಲ್ಲಾ ತರಹದ ವಾಹನಗಳ ನಿಲುಗಡೆಯನ್ನು ನಿಷೇಧಿಸಿ ಸಂಚಾರ ಉದ್ಯಾನವನಕ್ಕೆ ಬರುವ ಶಾಲಾ ಮಕ್ಕಳ ವಾಹನಗಳಿಗೆ ಮದ್ರಾಸ್ ಬ್ಯಾಂಕ್ ರಸ್ತೆಯ ಉತ್ತರ ಭಾಗದಲ್ಲಿ ನಿಲುಗಡೆಗೆ ಆದೇಶಿಸಿರುತ್ತೇನೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 13.02.2004ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 13.02.2004ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್.986 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:55/04, ದಿನಾಂಕ: 19ನೇ ಜೂನ್, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಜಯಮ್ಮ W/o ಲೇಟ್ ಆರ್. ರಾಮಕೃಷ್ಣಪ್ಪಾ, ನಂ. 16, L.I.G. II, A.M. ಪಾಳ್ಯ ಹೌಸಿಂಗ್ ಕಾಲೋನಿ, ಶಿರಾಗೇಟ್, ತುಮಕೂರು.

1. ಟಿ.ಎನ್. ರಂಗನಾಥ್, T.D. ನರಸಿಂಹಯ್ಯ, 2ನೇ ಕ್ರಾಸ್, ಪಿ.ಆರ್. ನಗರ ಹಳೆ ಮಾರ್ಕೆಟ್, ತುಮಕೂರು.
2. ದಿ ಓರಿಯಂಟಲ್ ಇನ್‌ಶ್ಯೂರನ್ಸ್ ಕಂ.ಲಿ., T.G.M.A. ಬಿಲ್ಡಿಂಗ್ 1ನೇ ಫ್ಲೋರ್ J.C. ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಜಯಮ್ಮ W/o ಲೇಟ್ ಆರ್. ರಾಮಕೃಷ್ಣಪ್ಪಾ ಇವರು ತಮ್ಮ ಮಗನಾದ ಆರ್. ರಾಮದಾಸ್ ಇವರು ಪ್ರತಿವಾದಿ-ಟಿ.ಎನ್. ರಂಗನಾಥ್ ಇವರ ಆಟೋ ರಿಕ್ಷಾ ನಂ. ಕೆಎ.06.6058 ವಾಹನದಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 26.05.2004 ರಂದು 12.45 ಗಂಟೆಗೆ ಉದ್ಯೋಗ ಸಮಯದಲ್ಲಿ ಕೊರಟಗೆರೆಯಿಂದ ತುಮಕೂರಿಗೆ, ಮಂಜುಶ್ರೀ ವೈನ್ಸ್ ಶಿರಾಗೇಟ್ ತುಮಕೂರಿನಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.989

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:57/04, ದಿನಾಂಕ: 3ನೇ ಜುಲೈ, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಶಶಿಕಲಾ W/o ಲೇಟ್ ಬಿ.ಸಿ. ರುದ್ರಯ್ಯ, ವಯಸ್ಸು ಸುಮಾರು 35 ವರ್ಷ
2. ಬಿ.ಆರ್. ಚಾಯಾ D/o ಬಿ.ಸಿ. ರುದ್ರಯ್ಯ, ವಯಸ್ಸು ಸುಮಾರು 20 ವರ್ಷ,
3. ಬಿ.ಆರ್. ಶಿವರಾಜು S/o ಬಿ.ಸಿ. ರುದ್ರಯ್ಯ, 18 ವರ್ಷ

ವಿಳಾಸ: ಬಂಡೀಹಳ್ಳಿ, ನಿಟ್ಟೂರು ಹೋಬಳಿ, ಗುಬ್ಬಿ ತಾಲ್ಲೂಕು.

1. ಟಿ.ಎಂ.ಎನ್. ರಾಜು, S/o ಮಲ್ಲದೇಸಪ್ಪಾ, ಪ್ರಾಪ್ತರು, S.L.N.S. ಟ್ರಾನ್ಸ್‌ಪೋರ್ಟ್ J.C. ರೋಡ್, ತುಮಕೂರು.
2. ದಿ ಓರಿಯಂಟಲ್ ಇನ್‌ಶ್ಯೂರನ್ಸ್ ಕಂ.ಲಿ., T.G.M.A. ಬಿಲ್ಡಿಂಗ್ 1ನೇ ಫ್ಲೋರ್ J.C. ರಸ್ತೆ, ತುಮಕೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಶಿಕಲಾ W/o ಲೇಟ್ ಬಿ.ಸಿ. ರುದ್ರಯ್ಯ ಇವರು ತಮ್ಮ ಯಜಮಾನರಾದ ಬಿ.ಸಿ. ರುದ್ರಯ್ಯ ಇವರು ಪ್ರತಿವಾದಿ-(1) ಟಿ.ಎಂ.ಎನ್. ರಾಜು ಇವರ ಕೆಎ.02.ಬಿ.3335 ಲಾರಿಯಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 09.06.2004 ರಂದು ಉದ್ಯೋಗ ಸಮಯದಲ್ಲಿ ಬನ್ನೇರುಘಟ್ಟ ಪೊಲೀಸ್ ಸ್ಟೇಷನ್ ವ್ಯಾಪ್ತಿಯಲ್ಲಿ, ಪೂರ್ಣ ಪ್ಯಾಕೇಜಿಂಗ್ ಫ್ಯಾಕ್ಟರಿ, ಜಿಗಣಿ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ

ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.990

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:60/04, ದಿನಾಂಕ: 3ನೇ ಜುಲೈ, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಗಣಪತಿ ವಿಠೋಬಾ ಮಾಲಿ, 42 ವರ್ಷ,
2. ಶಕುಂತಲಾ W/o ಗಣಪತಿ ವಿಠೋಬಾ ಮಾಲಿ, 35 ವರ್ಷ,
3. ಸವಿತಾ D/o ಗಣಪತಿ ವಿಠೋಬಾ ಮಾಲಿ 17 ವರ್ಷ,
4. ಶರಥ್ S/o ಗಣಪತಿ ವಿಠೋಬಾ ಮಾಲಿ 15 ವರ್ಷ,

R/o ಬೆಲಂಕಿ ಗ್ರಾಮ ಜಥ್ ತಾಲ್ಲೂಕು
ಸಾಂಗಲಿ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.

ವಿರುದ್ಧ

1. M/s ಆಲ್ಪ ಟೈಮ್ ಲಿ., ಸಮಿ ಬಿಲ್ಡಿಂಗ್, 6ನೇ ಕ್ರಾಸ್ ಸದಾಶಿವನಗರ, ತುಮಕೂರು.
2. ನ್ಯಾಷನಲ್ ಇನ್‌ಶ್ಯೂರೆನ್ಸ್ ಕಂ.ಲಿ., Division No. VIII S-7 Thiru-Vi-Ka ಇಂಡಸ್ಟ್ರಿಯಲ್ ಎಸ್ಟೇಟ್ ಗ್ವಿಂಡಿ, ಚೆನ್ನೈ-600 032.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಗಣಪತಿ ವಿಠೋಬಾ ಮಾಲಿ, ಇವರು ತಮ್ಮ ಮಗನಾದ, ಸಂಜಯ ಗಣಪತಿಮಾಲಿ ಇವರು ಪ್ರತಿವಾದಿ-ಮೆ:ಆಲ್ಪಟೈಮ್ ಲಿ., ಆರ್-1 ಇವರ ಉದ್ದಿಮೆಯಲ್ಲಿ "ರಿ ಕಂಡಕ್ಟಿಂಗ್" ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 26.05.2004 ರಂದು ಮಧ್ಯಾಹ್ನ 3.00 ಗಂಟೆ ಸಮಯದಲ್ಲಿ ತುಮಕೂರು ನಗರದ ಬಾರ್‌ಲೈನ್‌ನಲ್ಲಿ ವಿದ್ಯುತ್ ತಂತಿ ಮುರಿದು ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.991

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:61/04, ದಿನಾಂಕ: 6ನೇ ಜುಲೈ, 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು**

1. ಮಂಜುಳಾ W/o ಲೇಟ್ ರವಿಶಂಕರ್ ವಯಸ್ಸು 25 ವರ್ಷ
2. ಗಿರೀಶ್ S/o ಲೇಟ್ ರವಿಶಂಕರ್, ವಯಸ್ಸು, 8 ವರ್ಷ.

R/o ಬ್ರಹ್ಮಸಂದ್ರ ಗ್ರಾಮ ಕೋರಾ ಹೋಬಳಿ
ತುಮಕೂರು ತಾಲ್ಲೂಕು.

ವಿರುದ್ಧ

1. V. ಚಂದ್ರಕಲಾ D/o ಗೊತ್ತಿಲ್ಲ. ರಾಜ್ಯ ಜನಿವಾರ ಸಂವರ್ಧನಾ ಕೇಂದ್ರ ಹೆಸರಘಟ್ಟ, ಬೆಂಗಳೂರು-560 088.
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., CBO7 ಪೀಣ್ಯ ಬ್ರ್ಯಾಂಚ್ ಆಫೀಸ್, ನಂ.20, 100 ಅಡಿ ರಸ್ತೆ, ಜಾಲಹಳ್ಳಿ ಕ್ರಾಸ್, ಚೊಕ್ಕಸಂದ್ರ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಮಂಜುಳಾ W/o ಲೇಟ್ ರವಿಶಂಕರ್, ಇವರು ತಮ್ಮ ಯಜಮಾನರಾದ ರವಿಶಂಕರ್ ಇವರು 1ನೇ ಪ್ರತಿವಾದಿ ವಿ. ಚಂದ್ರಕಲಾ ಇವರ ಟಾಟಾ ಸುಮೋ ವಾಹನ ಸಂಖ್ಯೆ: ಕೆಎ05-ಎನ್-1652 ವಾಹನದಲ್ಲಿ ಚಾಲಕನಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 22.02.2004 ರಂದು ಉದ್ಯೋಗ ಸಮಯದಲ್ಲಿ ಬೆಂಗಳೂರು-ಮೈಸೂರು ರಸ್ತೆ ದಾಸಪ್ಪನದೊಡ್ಡಿ

ಕ್ರಾಸ್, ಪಟ್ಟದಮ್ಮ ದೇವಸ್ಥಾನದ ಬಳಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.992

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು, ಇವರ ಕಾರ್ಯಾಲಯದ ನಡವಳಿಕೆಗಳು**
**ಸಂಖ್ಯೆ: ಡಿಆರ್‌ಟಿ/ ಡಿಎಲ್‌ಎಸ್/ ಸಿಆರ್:61/2000-01, ದಿನಾಂಕ: 16ನೇ ಜೂನ್, 2004**

**ವಿಷಯ :** ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತುಪ್ಪದ ಕೋಣ, ಶಿರಾ ತಾಲ್ಲೂಕು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ-33/ ಎಂಕೆಟಿ/ ಎಲ್‌ಕ್ಯೂಡಿ/ 2000-01, ದಿನಾಂಕ: 24.07.2000.
2. ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ/ ಡಿಎಲ್‌ಎಸ್/ ಸಿಆರ್-61/ 2000-01 ದಿನಾಂಕ: 21.08.2000.
3. ಸಮಾಪನೆ ಆದೇಶ ಡಿಆರ್‌ಟಿ/ ಡಿಎಲ್‌ಎಸ್/ ಸಿಆರ್-61/2000-01 ದಿನಾಂಕ: 30.10.2000.
4. ಈ ಕಛೇರಿಯ ಸಮಾಪನಾಧಿಕಾರಿ ಬದಲಾವಣೆ ಆದೇಶ ಸಂಖ್ಯೆ: ಡಿಆರ್‌ಟಿ/ ಡಿಎಲ್‌ಎಸ್/ ಸಿಆರ್-61/ 2000-01 ದಿನಾಂಕ: 18.04.2002.
5. ಸಹಕಾರ ಅಭಿವೃದ್ಧಿ ಅಧಿಕಾರಿ ಶಿರಾ ಮತ್ತು ಸಮಾಪನಾಧಿಕಾರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ತುಪ್ಪದ ಕೋಣ, ಇವರ ಪತ್ರ ಸಂಖ್ಯೆ: ಸ.ಅ.ಅ. ಶಿರಾ/ ಸಮಾಪನೆ/ 2004-05 ದಿನಾಂಕ:08.06.2004.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ತುಪ್ಪದ ಕೋಣ, ಶಿರಾ ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಎಂ/ 9327/82-83 ದಿನಾಂಕ: 30.09.1982 ಆಗಿದ್ದು ಸದರಿ ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 24.07.2000ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2)ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಸಿಯಾಗಲೀ ತಕರಾರುಗಳು ಆಕ್ಷೇಪಣೆ ಬಾರದಿದ್ದುದರಿಂದ ಉಲ್ಲೇಖ (3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು.

ಸಮಾಪನಾಧಿಕಾರಿಯವರು ನೊಂದಣಿ ರದ್ದತಿಗೆ ಕ್ರಮ ಕೈಗೊಂಡಿಲ್ಲದಿರುವುದರಿಂದ ಉಲ್ಲೇಖ (4)ರ ಮೇರೆಗೆ ಸಮಾಪನಾಧಿಕಾರಿಯನ್ನು ಬದಲಾಯಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ ಶಿರಾ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶ ನೀಡಲಾಯಿತು, ನಂತರ ಈ ಬಗ್ಗೆ ಸಮಾಪನಾಧಿಕಾರಿಯವರು ಸಂಘದ ಶೂನ್ಯ ಆಸ್ತಿ ಜವಾಬ್ದಾರಿ ತಃಖ್ತೆಯೊಂದಿಗೆ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಉಲ್ಲೇಖ (5)ರ ಮೇರೆಗೆ ಸಮಾಪನಾಧಿಕಾರಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ತುಪ್ಪದಕೋಣ, ಶಿರಾ ತಾಲ್ಲೂಕು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಶಿರಾ ಇವರು ಸಲ್ಲಿಸಿರುತ್ತಾರೆ.

ಪ್ರಯುಕ್ತ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಲು ಉತ್ಪಾದಕರ ಸಹಕಾರ ಸಂಘ ನಿ, ತುಪ್ಪದಕೋಣ, ಶಿರಾ ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಎಆರ್‌ಎಂ/ 9327/82-83 ದಿನಾಂಕ: 30.09.1982, ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯಿದೆ 1959ರ ಕಲಂ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001 ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 16.06.2004ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**
ಸಹಕಾರ ಸಂಘಗಳ ಉಪನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.994

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉ.ಕ. ಕಾರವಾರ ರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಅಬಕಾರಿ/ ಡಿಟಿಸಿಆರ್/ 9/ 2001-02, ದಿನಾಂಕ: 30ನೇ ಜೂನ್, 2004**

**ಉಪಸ್ಥಿತರು:**

ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಶ್ರೀ ವಿ.ಬಿ. ಗಾಂವಕರ,<br>ಪೊಲೀಸ್ ವೃತ್ತ ನಿರೀಕ್ಷಕರು, ಹೊನ್ನಾವರ ವೃತ್ತ,<br>ಹೊನ್ನಾವರ. | | 1. ಗೋಪಾಲ ಥಾಕು ಹರಿಕಂತ್ರ,<br>2. ರಾಜೇಶ ನಾಗಪ್ಪ ಹರಿಕಂತ್ರ<br>3. ಪಾಂಡುರಂಗ ಗಾರು ಹರಿಕಂತ್ರ<br>4. ತುಕಾರಾಮ ಕೀರಾ ಹರಿಕಂತ್ರ<br>(ಎಲ್ಲರು ಸಾ: ಕೇಣಿ ಹರಿಕಂತ್ರ ಕೇರಿ, ಅಂಕೋಲಾ)<br>5. ನುನಾ ಗಣೇಶ ಹರಿಕಂತ್ರ,<br>ಸಾ: ದೇಶನಿಭಾಗ ಕೇರಿ, ಅಂಕೋಲಾ |

**ತೀರ್ಪು**

1. ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34 ರಂತೆ ಹೊರಿಸಿದ್ದು, ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ದಿನಾಂಕ: 18.04.2001ರಂದು ಸಿ.ಪಿ.ಐ. ಹೊನ್ನಾವರ ಇವರು ಗೋವಾ ರಾಜ್ಯದಿಂದ ಸಮುದ್ರ ಮಾರ್ಗವಾಗಿ ದೋಣಿಯಲ್ಲಿ ಗೈರು ಕಾಯ್ದೆಶೀರ ಸರಾಯಿ ಪೊಟ್ಲೆಗಳು ಹೊನ್ನಾವರ ಕಾಸರಕೋಡ ಬದಿಗೆ ಬರುತ್ತಾ ಇದೆ ಎಂದು ಬಂದ ಖಚಿತವಾದ ಬಾತ್ಮಿಯ ಮೇರೆಗೆ, ಅಬಕಾರಿ ಗುತ್ತಿಗೆದಾರರ ಮ್ಯಾನೇಜರ್ ಹಾಗೂ ವಾಲಂಟೀಯರ್ಸ್ ಇಬ್ಬರು ಪಂಚರು ಮತ್ತು ಸಿಬ್ಬಂದಿಗಳೊಂದಿಗೆ, ಶರಾವತಿ ಹೊಳೆಯ ಅಳ್ವೇ ಹತ್ತಿರ ಹೋಗಿ ಕಾಯುತ್ತಿದ್ದಾಗ, 18-00 ಗಂಟೆಯ ಸಮಯಕ್ಕೆ ಅರಬ್ಬಿ ಸಮುದ್ರದ ಮಾರ್ಗವಾಗಿ ಅಳ್ವೇ ಹತ್ತಿರ ಒಂದು ದೊಡ್ಡ ದೋಣಿ ಸಮುದ್ರ ದೀಪ ಎಂದು ಬರೆದಿದ್ದು ಅದಕ್ಕೆ ಯಮಹಾ ಕಂಪನಿಯ 20 ಹೆಚ್.ಪಿ.ಯ ಒಂದು ಮಷೀನ್ ಸಂಖ್ಯೆ: ಕ್ಯಾರೋಸಿನ್ 20 ಇ-20 ಎಫ್.ಕೆ. 6/ ಎಂ.ಎಸ್.ಎಲ್. 30072-8 ಮತ್ತು ಇನ್ನೊಂದು ಯಮಹಾ ಕಂಪನಿಯ 25 ಹೆಚ್.ಪಿ.ಯ ಮಷೀನಿನ ಮೇಲೆ ಇ-5 ಎಫ್.ಕೆ. -6/ಎ.ಎಚ್.ಎಲ್. 11381 ಗಳನ್ನು ಜೋಡಿಸಿದ್ದು, ಅದರಲ್ಲಿ ಐದಾರು ಜನ ಕುಳಿತುಕೊಂಡು 375 ಮಿ.ಲೀನ. 48 ರಂತೆ ಒಟ್ಟು 18 ಪೊಟ್ಲೆಗಳಲ್ಲಿ ಗೋವಾ ರಾಜ್ಯದ ಬ್ಲೂಸ್ಟಾರ್ ಫೆನ್ನಿ ಬಾಟ್ಲಿಗಳನ್ನು ಅನಧಿಕೃತವಾಗಿ ಸಾಗಿಸುತ್ತಿದ್ದುದನ್ನು ಕಂಡು ಹಿಡಿದು, ಸದರಿ ಮದ್ಯಸಾರದ ಸ್ವತ್ತುಗಳು ಹಾಗೂ ದೋಣಿ ಮತ್ತು ಮಷೀನುಗಳನ್ನು ಮುಂದಿನ ಕ್ರಮದ ಕುರಿತು ಜಪ್ತು ಮಾಡಿ, ಹೊನ್ನಾವರ ಪೊಲೀಸ್ ಠಾಣೆಗೆ ಫಿರ್ಯಾದು ನೀಡಿದ ಪ್ರಕಾರ ಪ್ರಥಮ ಮಾಹಿತಿ ವರದಿ ನಂ. 119/2001 ದಿನಾಂಕ: 08.04.2001 ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ವಾಹನದ ಸಮೇತ ಹಾಗೂ ಗುನ್ನೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) 2ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಪಿ.ಎಸ್.ಐ. ಹೊನ್ನಾವರ ಪೊಲೀಸ್ ಠಾಣೆ ಇವರು ವಿನಂತಿಸಿರುತ್ತಾರೆ.

3. ದಿನಾಂಕ: 04.09.2001 ರಂದು ಶ್ರೀ ಗೋಪಾಲ ಥಾಕು ಹರಿಕಂತ್ರ, ಸಾ: ಕೇಣಿ, ಅಂಕೋಲಾ ತಾಲ್ಲೂಕು ಇವರು ಈ ಪ್ರಾಧಿಕಾರದಲ್ಲಿ ತನ್ನ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸುತ್ತಾ, ಈ ಪ್ರಕಣದಲ್ಲಿ ಜಪ್ತಿಯಾದಂತಹ ಸಮುದ್ರ ದೀಪ ಎಂಬ ದೋಣಿಯು ತನ್ನ ಮಾಲೀಕತ್ವದ್ದಾಗಿದ್ದು, ಜಪ್ತಿಯಾದ ಯಮಹಾ ಇಂಜೀನ್ ಸಂಖ್ಯೆ: ಇ-5-ಎಫ್‌ಕೆ-6 ಎಕೆಎಲ್-11381 ನೇದರ ಮಾಲೀಕರು ಓಮು ಕೀರಾ ಚಂಡಿಯೇಕರ್, ಸಾ: ಚೆಂಡಿಯಾ, ಕಾರವಾರ ತಾಲ್ಲೂಕು ಇವರದ್ದಾಗಿದ್ದು, ಈ ಬಗ್ಗೆ ತಾನು ಅವರ ಎಸ್.ಪಿ.ಎ. ಧಾರಕನಾಗಿರುತ್ತೇನೆಂದೂ, ಅದೇ ರೀತಿ ಜಪ್ತಿಯಾದ ಯಮಹಾ 20-ಎಫ್‌ಕೆ, (18 ಎಚ್.ಪಿ) ಕಾರ್ಟನ್ ನಂ. 297665 ಇಂಜೀನ್ ಸಂಖ್ಯೆ: 300728 ನೇದರ ಮಾಲೀಕರು ಸುಧೀರ ಮೋಟಾ ತಾಂಡೇಲ, ಸಾ: ಚೆಂಡಿಯಾ, ಕಾರವಾರ ತಾಲ್ಲೂಕು ಇವರದ್ದಾಗಿದ್ದು, ಈ ಬಗ್ಗೆ ತಾನು ಅವರ ಎಸ್.ಪಿ.ಎ. ಧಾರಕನಾಗಿರುತ್ತೇನೆಂದೂ, ಸದರಿಯವರು ದೋಣಿಯನ್ನು ಯಾವುದೇ ಅಪರಾಧದಲ್ಲಿ ಬಳಸಿರುವುದಿಲ್ಲವಾಗಿಯೂ ತಿಳಿಸುತ್ತಾ, ಈ ಪ್ರಕರಣದಲ್ಲಿ ಹೊರಿಸಲಾದ ಆರೋಪವನ್ನು ಅಲ್ಲಗಳೆದು ಜಪ್ತಿಯಾದಂತಹ ದೋಣಿ ಮತ್ತು ಮಷೀನುಗಳನ್ನು ಬಿಡುಗಡೆ ಮಾಡಬೇಕಾಗಿಯೂ ವಿನಂತಿಸಿರುತ್ತಾರೆ ಮತ್ತು ವಿಚಾರಣೆ ಮುಗಿಯುವವರೆಗೆ ಬಹಳ ದಿನಗಳ ಕಾಲಾವಕಾಶ ಬೇಕಾಗುವುದರಿಂದ ದೋಣಿ ಮತ್ತು ಮಷೀನನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿದ್ದು, ಸದರಿ ಅರ್ಜಿಯ ಬಗ್ಗೆ ವಿಚಾರಣೆ ನಡೆಯಿಸಿ, ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಿ, ದಿನಾಂಕ: 05.10.2001ರಂದು ಈ ಪ್ರಾಧಿಕಾರದಿಂದ ಆದೇಶಿಸಲಾಗಿರುತ್ತದೆ.

4. ಈ ಪ್ರಕರಣದಲ್ಲಿ ಜಪ್ತಿಯಾದ ಸರಾಯಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ದಿನಾಂಕ: 05.10.2001ರಂದು ಈ ಪ್ರಕರಣದ ಆರೋಪಿಗಳಿಗೆ ಮತ್ತು ದೋಣಿಯ ಮಾಲೀಕರು ಹಾಗೂ ಎಸ್.ಪಿ.ಎ. ಧಾರಕರಿಗೆ ಕಾರಣ ಕೇಳಿ ನೋಟೀಸನ್ನು ಜಾರಿಗಾಗಿ ಕಳುಹಿಸಲಾಗಿ ಸದರಿ ನೋಟೀಸನ್ನು ಫಿರ್ಯಾದುದಾರರು ದಿನಾಂಕ: 22.10.2001ರಂದು ಜಾರಿ ಮಾಡಿದ್ದು, ಸದರಿ ಆರೋಪಿಗಳಾಗಲೀ, ವಾಹನದ ಮಾಲೀಕರಾಗಲೀ, ಅವರ ಎಸ್.ಪಿ.ಎ. ಧಾರಕರಾಗಲೀ ಇಂದಿನವರೆಗೂ ತನ್ನ ಸಮಜಾಯಿಷಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ಈ ಪ್ರಕರಣದ ತನಿಖಾಧಿಕಾರಿಗಳಾದ ಪಿ.ಎಸ್.ಐ. ಹೊನ್ನಾವರ ಪೊಲೀಸ್

ಠಾಣೆ ಇವರು ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ದಿನಾಂಕ: 19.10.2001ರಂದು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ಮಾದರಿ ಸೀಸೆಗಳಲ್ಲಿ 25 ಸೆಂಟಿಗ್ರೇಡ್‌ಗಳಲ್ಲಿ ಶೇ. 27 ವಿವಿ ರಷ್ಟು ಇಥೇನಲ್ ಆಲ್ಕೋಹಾಲ್ ಪತ್ತೆಯಾಗಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಜಪ್ತಿಯಾದ ಸರಾಯಿಯು ತನಗೆ ಸಂಬಂಧಪಟ್ಟ ಬಗ್ಗೆ ಇಂದಿನವರೆಗೆ ಯಾರೂ ಅಧಿಕೃತ ದಾಖಲೆಗಳೊಂದಿಗೆ ತನ್ನ ಹಕ್ಕನ್ನು ಸ್ಥಾಪಿಸಿ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ.

5. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ (1) -ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯೂ-1 ರಿಂದ 4 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ ನಿಶಾನೆ ಪಿ-1 ರಿಂದ ಪಿ-3 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಿಬ್ಬರೂ ಪಿ.ಡಬ್ಲ್ಯೂ-3 ಮತ್ತು ಪಿ.ಡಬ್ಲ್ಯೂ-4 ರಂತೆ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

6. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡು ಬಂದಿದ್ದರಿಂದ ದಂಡ ಪ್ರಕ್ರಿಯೆ ಸಂಹಿತೆ ಕಲಂ-313ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1ರಂತೆ ಪಡೆದುಕೊಳ್ಳಲಾಯಿತು. ಯಾವುದೇ ನಿಶಾನೆಗಳನ್ನು ಗುರ್ತಿಸಿಕೊಂಡಿರುವುದಿಲ್ಲ.

7. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎನ್.ವಿ. ನಾಯಕ, ವಕೀಲರು ಕಾರವಾರ ರವರು ಮಂಡಿಸಿದ ಲಿಖಿತ ವಾದ ವಿವಾದಗಳನ್ನು ಪರಾಂಬರಿಸಲಾಯಿತು. ಕಡತದಲ್ಲಿ ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡುಬರುತ್ತದೆ.

**8. ವಿವಾದಾಂಶಗಳು:**

1. ದಿನಾಂಕ: 18.04.2001ರಂದು ಸಾಯಂಕಾಲ 18-00 ಗಂಟೆಯ ಸಮಯಕ್ಕೆ ಹೊನ್ನಾವರದ ಶರಾವತಿ ಹೊಳೆಯ ಅಳವೆ ಹತ್ತಿರ ಅರಬ್ಬಿ ಸಮುದ್ರ ಮಾರ್ಗವಾಗಿ ಎರಡು ಮಷೀನುಗಳನ್ನು ಹೊಂದಿದಂತಹ "ಸಮುದ್ರ ದೀಪ" ಎಂಬ ಹೆಸರಿನ ದೋಣಿಯಲ್ಲಿ ಅಕ್ರಮವಾಗಿ ಪ್ರತಿಯೊಂದು ಪೊಟ್ಲೆಯಲ್ಲಿ 375 ಮಿ.ಲೀ.ನ 48ರಂತೆ ಒಟ್ಟು 18 ಪೊಟ್ಲೆಗಳಲ್ಲಿ ಗೋವಾ ರಾಜ್ಯದ ಬ್ಲೂಸ್ಟಾರ್ ಫೆನ್ನಿ ಬಾಟ್ಲಿಗಳನ್ನು ಅನಧಿಕೃತವಾಗಿ ಈ ಪ್ರಕರಣದ 5 ಜನ ಆರೋಪಿಗಳು ಸಾಗಿಸುತ್ತಿದ್ದರೇ? ಅಥವಾ ಇಲ್ಲವೇ

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ದೋಣಿಯಲ್ಲಿ ಅಕ್ರಮವಾಗಿ ಗೋವಾ ಫೆನ್ನಿ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ

3. ದೋಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ? ಅಥವಾ ಇಲ್ಲವೇ

ಅಂಶ-1 : ಸಕಾರಾತ್ಮಕವಾಗಿ

ಅಂಶ-2 : ನಕಾರಾತ್ಮಕವಾಗಿ

ಅಂಶ-3 : ಸಕಾರಾತ್ಮಕವಾಗಿ

**ಕಾರಣಗಳು**

9. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಸಾಕ್ಷಿದಾರರಾದ ಈ ಪ್ರಕರಣದ ಫಿರ್ಯಾದುದಾರರಾದ ವಿ.ಬಿ. ಗಾಂವಕರ, ಸಿ.ಪಿ.ಐ. ರವರು ದಿನಾಂಕ: 16.01.2002ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-1 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುನ್ನ ವಿಚಾರಣೆಗೆ ಸರಿಯಾಗಿಯೇ ಉತ್ತರಿಸುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ, ಈ ಪ್ರಕರಣದಲ್ಲಿ ತಾನು ತನಿಖಾಧಿಕಾರಿಯಾಗಿ ಕೆಲಸ ಮಾಡಿದ್ದೇನೆಂದೂ, ಡ್ಯೂಟಿಯ ವಿಷಯದಲ್ಲಿ ತಮ್ಮ ದಿನಚರಿಯಲ್ಲಿ ನಮೂದಿಸುತ್ತೇವೆಂದು ಅದೇ ರೀತಿ ಆ ದಿನವು ದಿನಚರಿಯಲ್ಲಿ ನಮೂದಿಸಿದ್ದೇವೆಂದೂ, ಪಂಚನಾಮೆ ಮಾಡಿದ ಸ್ಥಳದಲ್ಲಿರುವ ಪೆಟ್ಟಿಗೆ ಅಂಗಡಿಗಳು ಆ ದಿನ ಬಂದಾಗಿದ್ದವೆಂದೂ, ರೆಡಿಗೆ ಹೋಗುವಾಗ ಯಾವುದೇ ಬಾಟ್ಲಿಗಳನ್ನು ತೆಗೆದುಕೊಂಡು ಹೋಗಿರಲಿಲ್ಲವೆಂದೂ, ಮತ್ತು ಮೆಜಿಸ್ಟ್ರೇಟ್ ರಿಂದ ವಾರಂಟ್ ವಗೈರೆ ಪಡೆದುಕೊಂಡಿರಲಿಲ್ಲವೆಂದೂ, ಜಪ್ತಿಯಾದ ಬೋಟಿನಿಂದ ಅಕ್ರಮ ಸರಾಯಿಯನ್ನು ಜಪ್ತು ಮಾಡಿದ್ದು ಸುಳ್ಳು ಎನ್ನುವುದು ಮತ್ತು ಪಂಚನಾಮೆ ಮಾಡಿಲ್ಲವೆನ್ನುವುದು ಸರಿಯಲ್ಲವೆಂದೂ, ವಾರಸುದಾರರಿಲ್ಲದ ಮಾಲುಗಳು ದೊರೆತಲ್ಲಿ ನ್ಯಾಯಾಲಯಕ್ಕೆ ವಾರಸುದಾರರಿಲ್ಲದ ಮಾಲು ಎಂದು ವರದಿ ಮಾಡುತ್ತೇವೆಂದೂ, ವಾರಸುದಾರರಿಲ್ಲದ ಮಾಲನ್ನು ಸೇರಿಸಿ, ಸುಳ್ಳು ಪ್ರಕರಣ ದಾಖಲಿಸಿದ್ದೇವೆಂದರೆ ಸರಿಯಲ್ಲವೆಂದೂ, ಸದರಿ ದಿವಸ ಸ್ಥಳಕ್ಕೆ ಹೋಗಿದ್ದರೆಂಬುದಾಗಲೀ ಹಾಗೂ ಆರೋಪಿಗಳು ಓಡಿ ಹೋಗಿದ್ದಾರೆಂಬುದಾಗಲಿ ಸುಳ್ಳು ನುಡಿಯುತ್ತಿದ್ದೇನೆಂಬುದು ಸರಿಯಲ್ಲವೆಂದೂ, ಪ್ರಕರಣದಲ್ಲಿನ ಬೋಟಿನ ಮಾಲೀಕ ಯಾವುದೇ ಅಕ್ರಮ ದಂಧೆಯಲ್ಲಿ ತೊಡಗದೇ ಇದ್ದರೂ ಅಂಕೆ ಸಂಖ್ಯೆಗಾಗಿ ಸುಳ್ಳು ಪ್ರಕರಣ ದಾಖಲಿಸಿದ್ದೇವೆಂಬುದು ಸರಿಯಲ್ಲವೆಂದು ನುಡಿದಿರುತ್ತಾರೆ.

**10. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

ಈ ಪ್ರಕರಣದಲ್ಲಿ ಫಿರ್ಯಾದುದಾರರು ಭಾಗಶಃ ತನಿಖಾಧಿಕಾರಿಯಾಗಿದ್ದರು ಮುಂದಿನ ತನಿಖೆಯನ್ನು ಪಿ.ಎಸ್.ಐ. ಹೊನ್ನಾವರ ರವರು ಕೈಗೊಂಡಿರುವುದು ದಾಖಲೆಗಳಿಂದ ಕಂಡುಬರುತ್ತದೆ. ದಾಳಿಗೆ ಹೋದ ಬಗ್ಗೆ ದಿನಚರಿಯಲ್ಲಿ ನಮೂದಿಸದಿದ್ದ ಪಕ್ಷದಲ್ಲಿ ಅದನ್ನು ಸಾಬೀತುಪಡಿಸಲು ಎದುರುದಾರರ ಪಕ್ಷದವರು ಯಾವುದೇ ದಾಖಲೆಗಳನ್ನು ಹಾಜರುಪಡಿಸಿಲ್ಲ. ಹಾಗೂ ಪೆಟ್ಟಿಗೆ ಅಂಗಡಿಗಳು ಮುಚ್ಚಲ್ಪಟ್ಟಿದ್ದರಿಂದ ಸ್ಥಳೀಯ ಪಂಚರನ್ನು ಸಾಕ್ಷಿಗೆ ಪಡೆಯದಿರುವುದು ವ್ಯಕ್ತವಾಗುತ್ತದೆ. ಜಪ್ತಿಯಾದಂತಹ ಫೆನ್ನಿಯ ಬಾಟ್ಲಿಗಳ ಪೈಕಿ ಪ್ರತಿಯೊಂದು ಮೂಟೆಯಿಂದ ಒಂದೊಂದು ಬಾಟ್ಲಿಯ ಪ್ರಕಾರ ಒಟ್ಟು 18 ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದಿರುವದು ಪಂಚನಾಮೆಯಿಂದ ಒಂದೊಂದು ಬಾಟ್ಲಿಯ ಪ್ರಕಾರ ಒಟ್ಟು 18 ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದಿರುವುದು ಪಂಚನಾಮೆಯಿಂದ ಕಂಡು ಬರುವುದರಿಂದ ದಾಳಿಗೆ ಹೋಗುವಾಗ ಫಿರ್ಯಾದಿ ಕಡೆಯವರು ಯಾವುದೇ ಬಾಟ್ಲಿಗಳನ್ನು ಒಯ್ಯುವ ಪ್ರಶ್ನೆ ಉದ್ಭವಿಸುವುದಿಲ್ಲ. ಕ.ಅ. ಕಾಯ್ದೆ 1965ರ ಕಲಂ 52ರ ಪ್ರಕಾರ ಇರುವ ಅಧಿಕಾರವನ್ನು ಬಳಸಿ, ಆರೋಪಿಯು ತಪ್ಪಿಸಿಕೊಳ್ಳುವ ಸಂದರ್ಭ ಇದ್ದಲ್ಲಿ ಮತ್ತು ಮುದ್ದೆಮಾಲುಗಳನ್ನು ಬೇರೆಡೆಗೆ ಸಾಗಿಸಬಹುದೆಂಬ ಅನುಮಾನವಿದ್ದಾಗ ಘನ ನ್ಯಾಯಾಲಯದಿಂದ ಸರ್ಚ್‌ವಾರಂಟನ್ನು ಪಡೆಯಲು ಸಾಧ್ಯವಾಗದಿದ್ದ ಸಂದರ್ಭದಲ್ಲಿ ಜಪ್ತು ಮತ್ತು ದಸ್ತಗಿರಿಯ ಕ್ರಮವನ್ನು ಜರುಗಿಸಲು ಅನ್ವೇಷಣಾಧಿಕಾರಿಗೆ ಅಧಿಕಾರವಿರುತ್ತದೆ. ವಾರಸುದಾರರಿಲ್ಲದ ಮುದ್ದೆಮಾಲುಗಳು ದೊರೆತಲ್ಲಿ ಇದೇ ಪ್ರಕರಣದ ಐದು ಜನ ಆರೋಪಿಗಳ ಮೇಲೆ ಆರೋಪ ಹೊರಿಸಿ, ಪ್ರಕರಣ ದಾಖಲಿಸಲು ಫಿರ್ಯಾದಿ ಕಡೆಯವರಿಗೆ ಆರೋಪಿಗಳ ಮೇಲಿರುವ ಸಿಟ್ಟು ಅಥವಾ ದ್ವೇಷ ಯಾವ ಬಗೆಗಿನದು ಎಂಬುದರ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ. ಅಲ್ಲದೇ ಅಂಕೆ ಸಂಖ್ಯೆಗಾಗಿ ಇದೇ ಅರ್ಜಿದಾರರ ದೋಣಿಯ ಮೇಲೆ ಏಕೆ ಗುನ್ಹೆ ದಾಖಲಿಸಿರುವರು ಎಂಬುದರ ಬಗ್ಗೆ ವಿವರಿಸಿಲ್ಲ.

1. ಅದೇ ದಿನ ದಿನಾಂಕ: 16.01.2001ರಂದು ಈ ಪ್ರಕರಣದ ತನಿಖಾಧಿಕಾರಿಗಳಾದ ವಿಶ್ರಾಮ ಥಾಕು ಕೊಟಾರಕರ ಪಿ.ಎಸ್.ಐ. ರವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-2 ರಂತೆ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ದಿನಾಂಕ: 08.02.2001ರಂದು ರಾತ್ರಿ 9-00 ಗಂಟೆಯ ಸಮಯಕ್ಕೆ ತಾನು ಠಾಣೆಯಲ್ಲಿದ್ದಾಗ ಈ ಕೇಸಿನ ಫಿರ್ಯಾದಿಯು ನೀಡಿದ ಫಿರ್ಯಾದನ್ನು ಸ್ವೀಕರಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 34 ರಡಿಯಲ್ಲಿ ಠಾಣಾ ಗುನ್ಹಾ ನಂ. 119/2001ರಂತೆ ಪ್ರಕರಣವನ್ನು ದಾಖಲಿಸಿಕೊಂಡು ಫಿರ್ಯಾದು ನೀಡಿದ ಕಾಲಕ್ಕೆ ಜಪ್ತಾದ 2 ಯಮಹಾ ಮಶೀನ್‌ಗಳು, ದೋಣಿ ಹಾಗೂ 18 ಪೊಟ್ಲೆಗಳಲ್ಲಿ ಇರುವ ಸರಾಯಿ ಬಾಟ್ಲಿಗಳನ್ನು ಮೂಲ ಪಂಚನಾಮೆಯೊಂದಿಗೆ ಹಾಗೂ ಮಾದರಿ ಸೀಸೆಗಳೊಂದಿಗೆ ಪಡೆದಿರುವುದಾಗಿಯೂ, ನಂತರ ದಿನಾಂಕ:06.05.2001ರಂದು ಮಾದರಿ ತೆಗೆದ ಸರಾಯಿ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗೆ ಬೆಂಗಳೂರಿಗೆ ಕಳುಹಿಸಿದೆನೆಂದೂ, ಸರಾಯಿ ಪೊಟ್ಲೆಗಳು ಮತ್ತು ಮಾದರಿ ಸೀಸೆಗಳನ್ನು ತೋರಿಸಿದಲ್ಲಿ ತಾನು ಗುರುತಿಸಬಲ್ಲೆನೆಂದು ನುಡಿದಿರುತ್ತಾರೆ. ನಂತರ ಎದುರುದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಉಳಿದ ಸರಾಯಿಯನ್ನು ಸಹಾ ರಾಸಾಯನಿಕ ಪರೀಕ್ಷೆಗೆ ಕಳುಹಿಸಲು ತನಗೆ ಯಾವ ತೊಂದರೆ ಇರಲಿಲ್ಲವೆಂದೂ, ಈ ಪ್ರಕರಣದಲ್ಲಿ ಜೀಪಿನ ಡ್ರೈವರಿನ ಸ್ಟೇಟ್‌ಮೆಂಟ್ ತೆಗೆದುಕೊಳ್ಳಲಿಲ್ಲವೆಂದೂ, ತಾವು ಯಾವುದೇ ಹೇಳಿಕೆ ಪಡೆದುಕೊಂಡಿಲ್ಲವೆನ್ನುವುದು ಸರಿಯಲ್ಲವೆಂದೂ, ಸುಳ್ಳು ದೋಷಾರೋಪಣಾ ಪಟ್ಟಿ ಸಲ್ಲಿಸಿದ್ದೇವೆನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**11. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

ಕರ್ನಾಟಕ ಅಬಕಾರಿ (ಮದ್ಯ ಸಾಗಣೆ) ನಿಯಮಾವಳಿಗಳು 1985ರ ನಿಯಮ 4 ರನ್ವಯ ಹೊರ ರಾಜ್ಯದ ಮದ್ಯವನ್ನು ಕರ್ನಾಟಕ ರಾಜ್ಯದ ಮೂಲಕ ಸಾಗಿಸಬೇಕಾದಲ್ಲಿ ಒಬ್ಬ ವ್ಯಕ್ತಿಯು ತನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳಬಹುದಾದ ಮದ್ಯದ ಪ್ರಮಾಣ 0.700 ಮಿ.ಲೀ. ಆಗಿರುತ್ತದೆ. ಈ ಪ್ರಕರಣದಲ್ಲಿ 375 ಮಿ.ಲೀ.ನ 18 ಸೀಸೆಗಳಷ್ಟು ಗೋವಾ ಫೆನ್ನಿಯನ್ನು ಅಂದರೆ 6.500 ಲೀಟರ್‌ನಷ್ಟು ಮಾದರಿ ತೆಗೆದಿದ್ದು, ಇದು 9 ಜನರು ಸ್ವಾಧೀನದಲ್ಲಿಟ್ಟುಕೊಳ್ಳಬಹುದಾದ ಮದ್ಯದ ಮಿತಿಯಾಗಿದೆ. ಆದುದರಿಂದ ಹೆಚ್ಚಿನ ಪ್ರಮಾಣದ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸುವ ಅವಶ್ಯಕತೆ ಕಂಡು ಬರುವುದಿಲ್ಲ. ಈ ಪ್ರಕರಣದಲ್ಲಿ ಏಳು ಜನ ಸಾಕ್ಷಿದಾರರುಗಳ ಹೇಳಿಕೆಯನ್ನು ಪಡೆದುಕೊಂಡಿದ್ದು ವಾಹನ ಚಾಲಕನು ಫಿರ್ಯಾದಿ ಕಡೆಯವನಾಗಿದ್ದರಿಂದ ಆತನು ಸಹ ಈ ಏಳು ಜನರಂತೆ ಸಾಕ್ಷಿಯನ್ನು ನುಡಿಯುವವನಾಗಿರುವುದರಿಂದ ಈತನ ಹೇಳಿಕೆಯಿಂದ ಎದುರುದಾರರ ಪಕ್ಷದವರಿಗೆ ಯಾವುದೇ ರೀತಿಯ ಸಹಕಾರಿಯಾಗುವಂತೆ ಕಂಡು ಬರುವುದಿಲ್ಲ. ತನಿಖಾಧಿಕಾರಿಗಳು ಪಡೆದುಕೊಂಡ ಹೇಳಿಕೆಗಳನ್ನು ಸಂಬಂಧಪಟ್ಟ ಮಾನ್ಯ ಕ್ರಿಮಿನಲ್ ನ್ಯಾಯಾಲಯಕ್ಕೆ ಸಲ್ಲಿಸುವುದರಿಂದ ಈ ಪ್ರಕರಣದಲ್ಲಿ ಯಾರದೇ ಹೇಳಿಕೆ ಪಡೆದುಕೊಂಡಿಲ್ಲಾ ಎನ್ನುವ ಬಗ್ಗೆ ಎದುರುದಾರರ ಪಕ್ಷದವರು ಸಾಬೀತುಪಡಿಸಿಲ್ಲ.

12. ಅಭಿಯೋಜನೆ ಪರ ಇನ್ನೊಬ್ಬ ಸಾಕ್ಷಿ ಹಾಗೂ ಪ್ರಕರಣದ ಪಂಚ ಸಾಕ್ಷಿ ನಂ. 2 ನೇಯವರಾದ ಜಟ್ಟಪ್ಪಾ ಅಯ್ಯಪ್ಪಾ ಅಂಬಿಗಾ ಇವರು ಪಿ.ಡಬ್ಲ್ಯೂ-3 ರಂತೆ ದಿನಾಂಕ: 28.01.2004ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ತಾನು ಈ ಪ್ರಕರಣದಲ್ಲಿ ಯಾವುದೇ ಪಂಚನಾಮೆಗೆ ಹೋಗಿಲ್ಲವೆಂದು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ. ನಂತರ ಮಾನ್ಯ ಎಡಿಪಿ ಯವರ ಪಾಟಿ ಸವಾಲಿನಲ್ಲಿ ಪೊಲೀಸರು ತನಗೆ ಪಂಚನಾಮೆಗೆ ಕರೆಸಿಲ್ಲವೆಂದೂ, ಆರೋಪಿಗಳಿಗೆ ಮತ್ತು ಅರ್ಜಿದಾರರಿಗೆ ಸಹಾಯ ಮಾಡಲು ಸುಳ್ಳು ಸಾಕ್ಷಿನುಡಿಯುತ್ತಿದ್ದೇನೆಂಬುದು ಸರಿಯಲ್ಲವೆಂದೂ ನುಡಿದಿರುತ್ತಾರೆ. ಅದೇ ರೀತಿ ದಿನಾಂಕ: 28.01.2004ರಂದು ಪ್ರಕರಣದ ಪಂಚ ಸಾಕ್ಷಿ ನಂ. 1ನೇಯವರಾದ ಮೋಹನ ನಾರಾಯಣ ಮೇಸ್ತಾ ಇವರು ಪಿ.ಡಬ್ಲ್ಯೂ-4 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ತಾನು ಈ ಪ್ರಕರಣದಲ್ಲಿ ಯಾವುದೇ ಪಂಚನಾಮೆಗೆ ಹೋಗಿಲ್ಲವೆಂದು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ. ನಂತರ ಮಾನ್ಯ ಎಡಿಪಿ ಯವರ ಪಾಟಿ ಸವಾಲಿನಲ್ಲಿ ಪೊಲೀಸರು ತನಗೆ ಪಂಚನಾಮೆಗೆ ಕರೆಸಿಲ್ಲವೆಂದೂ, ಆರೋಪಿಗಳಿಗೆ ಮತ್ತು ಅರ್ಜಿದಾರರಿಗೆ ಸಹಾಯ ಮಾಡಲು ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆಂಬುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

13. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

ಈ ಇಬ್ಬರೂ ಸಾಕ್ಷಿದಾರರು ಪಂಚನಾಮೆಗೆ ಹೋಗಿರದಿದ್ದರೆ ಪಂಚನಾಮೆಯ ಮೇಲಿನ ಸಹಿಯನ್ನು ಎಲ್ಲಿ ಮಾಡಿದರು ಎನ್ನುವ ಬಗ್ಗೆ ವಿವರಿಸಿಲ್ಲ. ಪಂಚನಾಮೆಯ ಮೇಲಿನ ಸಹಿಯನ್ನು ಗಮನಿಸಿದಾಗ ಪಂಚರುಗಳು ಕನ್ನಡದಲ್ಲಿ ಸಹಿ ಮಾಡಿರುವುದು ಕಂಡುಬರುತ್ತದೆ. ಹೀಗಾಗಿ ಅಕ್ಷರಸ್ಥರಾದಂತಹ ಈ ಪಂಚರುಗಳು ಪಂಚನಾಮೆಗೆ ಏಕೆ ಸಹಿ ಮಾಡಿದರು ಎಂಬುದನ್ನು ವಿವರಿಸದಿದ್ದ ಕಾರಣ ಅರ್ಜಿದಾರರಿಗೆ ಸಹಾಯ ಮಾಡಲು ಸುಳ್ಳು ಸಾಕ್ಷಿ ನುಡಿದಿರುವುದು ಖಚಿತವಾಗುತ್ತದೆ.

14. ಈ ಎಲ್ಲಾ ಕಾರಣಗಳಿಂದಾಗಿ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ದೋಣಿಯಲ್ಲಿ ಅಕ್ರಮವಾಗಿ ಫೆನ್ನಿ ಸೀಸೆಗಳನ್ನು ಸಾಗಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಬಲವಾಗಿ ಸಮರ್ಥಿಸಿರುವುದು ಹಾಗೂ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ನಿಸ್ಸಂಶಯವಾಗಿ ರುಜುವಾತುಪಡಿಸಿರುವುದು ಕಂಡುಬಂದಿರುವುದರಿಂದ ಒಂದನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

15. ದಿನಾಂಕ: 25.02.2004ರಂದು ಅರ್ಜಿದಾರರಾದಂತಹ ಗೋಪಾಲ ಥಾಕು ಹರಿಕಂತ್ರ ಇವರು ದಿನಾಂಕ: 25.02.2004ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಸಾಕ್ಷ್ಯವನ್ನು ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ನುಡಿಯುತ್ತಾ, ತನಗೆ ಸೇರಿದಂತಹ ಈ ಪ್ರಕರಣದ ಬೋಟಿನಲ್ಲಿ ತಾನು ಯಾವತ್ತೂ ಸಾರಾಯಿಯನ್ನು ಸಾಗಿಸಿಲ್ಲವೆಂದೂ, ತನ್ನ ಮೇಲೆ ಹೊನ್ನಾವರ ನ್ಯಾಯಾಲಯದಲ್ಲಿ ಹಾಕಿದಂತಹ ಪ್ರಕರಣವನ್ನು ನಿರ್ದೋಷಿಯೆಂದು ತೀರ್ಪಾಗಿರುತ್ತದೆ ಎಂದು ನುಡಿದಿರುತ್ತಾರೆ. ನಂತರ ಮಾನ್ಯ ಎಡಿಪಿ ಯವರ ಪಾಟಿ ಸವಾಲಿನಲ್ಲಿ ಹೊನ್ನಾವರ ಪೊಲೀಸ್ ಠಾಣೆಯ ಯಾವುದೇ ಪೊಲೀಸರು ತನಗೆ ಗೊತ್ತಿರುವುದಿಲ್ಲವೆಂದೂ, ಅವರಿಗೂ ತನಗೂ ಯಾವುದೇ ರೀತಿಯ ವೈರತ್ವ ಇರುವುದಿಲ್ಲವೆಂದೂ, ದಿನಾಂಕ: 08.04.2001 ರಂದು ಬೋಟನ್ನು ತಾನು ನಡೆಸುತ್ತಿರಲಿಲ್ಲವೆಂದೂ, ಅದಕ್ಕೆ ಎಂಕರ್ ಹಾಕಿ ಸಮುದ್ರದಲ್ಲಿ ಇಡಲಾಗಿತ್ತೆಂದೂ, ತನ್ನನ್ನು ಬಿಟ್ಟು ಬೇರೆ ಯಾರೂ ಬೋಟ ನಡೆಸುವುದಿಲ್ಲವೆಂದು ನುಡಿದಿರುತ್ತಾರೆ.

16. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ)2 ಪ್ರಕಾರ ಕ್ರಿಮಿನಲ್ ನಡಾವಳಿಯೇ ಬೇರೆ ಮತ್ತು ಮುಟ್ಟುಗೋಲು ನಡಾವಳಿಯೇ ಬೇರೆಯಾಗಿರುವುದರಿಂದ ಕ್ರಿಮಿನಲ್ ಪ್ರಕರಣದಲ್ಲಿನ ತೀರ್ಪನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣಿಸಲು ಬರಲಾರದು. ಅಲ್ಲದೇ ಆರೋಪಿಗಳು ಯಾವ ಕಾರಣದಿಂದ ಬಿಡುಗಡೆಯಾಗಿದ್ದಾರೆ ಎಂಬುದಕ್ಕೆ ಆಧಾರವಾಗಿ ಘನ ನ್ಯಾಯಾಲಯದ ತೀರ್ಪಿನ ನಕಲನ್ನೇ ಸಲ್ಲಿಸಿಲ್ಲ. ಅಲ್ಲದೇ ಬೋಟನ್ನು ಎಂಕರ್ ಹಾಕಿ ನಿಲ್ಲಿಸಿಡಲಾಗಿತ್ತೆನ್ನುವ ಬಗ್ಗೆ ಅರ್ಜಿದಾರರು ವಾಹನದ ಬಿಡುಗಡೆಗಾಗಿ ಸಲ್ಲಿಸಿರುವ ಮೂರು ಅರ್ಜಿಗಳಲ್ಲಿ ಎಲ್ಲಿಯೂ ವಿವರಿಸಿಲ್ಲ. ಈ ಪ್ರಕರಣದಲ್ಲಿ ಅರ್ಜಿದಾರರು ಬೋಟಿನ ಇಂಜಿನುಗಳ ಮಾಲೀಕರಿಂದ ಅಧಿಕಾರ ಪತ್ರವನ್ನು ಗುನ್ನೆ ದಾಖಲಾದ ಮೂರು ತಿಂಗಳ ನಂತರ ಪಡೆದಿರುವುದು ಕಂಡುಬರುತ್ತದೆ. ಸದರಿ ಮಾಲೀಕರುಗಳು ಈ ಪ್ರಕರಣದಲ್ಲಿ ಭಾಗಿಯಾಗಿಲ್ಲ ಎನ್ನುವುದನ್ನು ಸಾಬೀತುಪಡಿಸಲು ತನ್ನ ಸಾಕ್ಷ್ಯವನ್ನು ಈ ಪ್ರಾಧಿಕಾರದಲ್ಲಿ ನುಡಿಯಬಹುದಾಗಿತ್ತು. ಏಕೆಂದರೆ ಘಟನೆ ಸಂಭವಿಸಿದ ದಿನದಂದು ಇವರುಗಳೇ ಮಾಲೀಕರಾಗಿದ್ದರು. ಅಲ್ಲದೇ ಈ ಪ್ರಕರಣದ ಅರ್ಜಿದಾರರೇ ಆರೋಪಿಯು ಸಹ ಆಗಿರುವುದರಿಂದ ಘಟನೆ ಸಂಭವಿಸಿದ ದಿನದಂದು ಅರ್ಜಿದಾರರಾದ ದೋಣಿಯ ಮಾಲೀಕರು ಶಾಮೀಲಾಗಿಯೇ ಹಾಗೂ ಅವರಿಗೆ ಅರಿವಿದ್ದುಕೊಂಡೇ ಸದರಿ ದೋಣಿಯಲ್ಲಿ ಗೋವಾ ಫೆನ್ನಿಯನ್ನು ಸಾಗಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಆದುದರಿಂದ ಎರಡನೇ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

17. ವಾದವಿವಾದದ ಸಮಯದಲ್ಲಿ ಎದುರುದಾರರ ಪರ ವಕೀಲರು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ಕೆ.ಎಲ್. ಸುಬ್ಬಯ್ಯ ವಿರುದ್ಧ ಕರ್ನಾಟಕ ಸರ್ಕಾರ (ಕೆ.ಎಲ್.ಜೆ-1979 ಫುಟ್ ಸಂಖ್ಯೆ 410) ನೇದನ್ನು ಹಾಜರು ಪಡಿಸಿರುತ್ತಾರೆ. ಈ ತೀರ್ಪಿನಲ್ಲಿ ಕಲಂ 54 ನೇದನ್ನು ಪಾಲಿಸದಿದ್ದ ಕಾರಣ ಕಾರ್ಯವ್ಯಾಪ್ತಿ ಇಲ್ಲದೇ ಅನ್ವೇಷಣೆಯನ್ನು ಮಾಡಿರುವುದು ಕಂಡು ಬರುವುದರಿಂದ ಆರೋಪಿಯನ್ನು ಬಿಡುಗಡೆಗೊಳಿಸಲಾಗಿರುತ್ತದೆ. ಆದರೆ ಇದು ಕ್ರಿಮಿನಲ್ ಪ್ರಕರಣಕ್ಕೆ ಸಂಬಂಧಿಸಿದ ತೀರ್ಪಾಗಿದ್ದು, ಅದನ್ನು ಮುಟ್ಟುಗೋಲು ಪ್ರಕರಣದಲ್ಲಿ ಪರಿಗಣಿಸಲು ಬರಲಾರದು. ಏಕೆಂದರೆ ಮಾನ್ಯ ಎಡಿಪಿ ಯವರು ಸಲ್ಲಿಸಿರುವ ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯಕುಮಾರ್ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್ಆರ್ 2002, ಕೆ.ಎ.ಆರ್. 1375) ನೇದನ್ನು ಹಾಜರುಪಡಿಸಿದ್ದು, ಅದರಲ್ಲಿ ಆರೋಪಿ ತಾನು ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿದ್ದರೂ ಸಹ ಆ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ನಿಯಮಗಳಡಿಯಲ್ಲಿ ಸೂಚಿಸಿದಂತೆ ಸರ್ಕಾರಕ್ಕೆ ಮುಟ್ಟುಗೋಲು ಪ್ರಕ್ರಿಯೆಯ ಅಧಿಕಾರ ವ್ಯಾಪ್ತಿ ಕುಂಠಿತಗೊಳ್ಳುವುದಿಲ್ಲ ಎಂದು ತೀರ್ಪಾಗಿರುತ್ತದೆ.

18. ಸರ್ಕಾರದ ಪರವಾಗಿ ಸಲ್ಲಿಸಿರುವ ಮಾನ್ಯ ಉಚ್ಚ ನ್ಯಾಯಾಲಯದ ಇನ್ನೊಂದು ತೀರ್ಪು ಅಬಕಾರಿ ನಿರೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಇತರರು ವಿರುದ್ಧ ಡಿ. ವೆಂಕಟರಮಣ ಸ್ವಾಮಿ (ಕೆ.ಸಿ. ಆ್ಯಂಡ್ ಸಿ.ಆರ್. 2003 (1) ಫುಟ ಸಂಖ್ಯೆ. 189) ರಲ್ಲಿ ವಾಹನದಲ್ಲಿ ಪ್ರಭಾರವನ್ನು ಹೊಂದಿದಂತಹವನು ಕಾನೂನನ್ನು ಉಲ್ಲಂಘಿಸಿ, ಕರ ತಪ್ಪಿಸಿದ ಸ್ವತ್ತುಗಳ ಸಾಗಾಟದಲ್ಲಿ ತೊಡಗಿದಾಗ, ಆ ವಾಹನದ ಮಾಲೀಕನು ಪರಾನುಭವದ ಹೊಣೆಗಾರನಾಗಬೇಕಿದ್ದು, ಈ ರೀತಿಯ ತಪ್ಪಿಗಾಗಿ ಆತನು ಮುಟ್ಟುಗೋಲಿನಂತಹ ಪರಿಣಾಮವನ್ನು ಎದುರಿಸಬೇಕಾಗುತ್ತದೆಂದು ತೀರ್ಪಾಗಿರುತ್ತದೆ.

19. **ಮೂರನೇಯ ವಿವಾದಾಂಶ:** ಮೊದಲನೆಯ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ದೋಣಿಯಲ್ಲಿ ಗೋವಾ ಫೆನ್ನಿಯನ್ನು ವಾಹನದ ಮಾಲೀಕರು ಶಾಮೀಲಾಗಿ ಸಾಗಿಸಿರುವುದು ಸಾಬೀತಾಗಿರುವದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ 78/2000, ದಿನಾಂಕ: 07.11.2003ರಲ್ಲಿ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ (1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊನ್ನಾವರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 119/2001 ದಿನಾಂಕ: 08.04.2001ರಲ್ಲಿ ಜಪ್ತಾದ ಸಮುದ್ರ ದೀಪ ಎಂಬ ಹೆಸರಿನ ಒಂದು ದೊಡ್ಡ ದೋಣಿ ಹಾಗೂ 20 ಎಚ್.ಪಿ.ಯ ಯಮಹಾ ಕಂಪನಿಯ ಒಂದು ಮಶೀನ್ ಸಂಖ್ಯೆ. ಇ-20, ಎಫ್‌ಕೆ-6, ಎಂಎಸ್‌ಎಲ್-300728 ಮತ್ತು ಇನ್ನೊಂದು 25 ಎಚ್‌ಪಿ ಯ ಯಮಹಾ ಕಂಪನಿಯ ಮಶೀನ್ ಸಂಖ್ಯೆ: ಇ-5, ಎಫ್‌ಕೆ-6, ಎಎಚ್‌ಎಲ್-11381 ನೇಯವುಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಜೂನ್ ತಿಂಗಳ 30ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿಗೆ ಬರುವುದು.

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ. ನಂ. 1 : ವಿ.ಬಿ. ಗಾಂವಕರ, ಸಿ.ಪಿ.ಐ.
ಪ್ರಾ.ಸಾ. ನಂ. 2 : ವಿ.ಟಿ. ಕೊಟಾರಕರ್, ಪಿ.ಎಸ್.ಐ.
ಪ್ರಾ.ಸಾ. ನಂ. 3 : ಜಟ್ಟಪ್ಪ ಅಯ್ಯಪ್ಪಾ ಅಂಬಿಗ
ಪ್ರಾ.ಸಾ. ನಂ. 4 : ಮೋಹನ ನಾರಾಯಣ ಮೇಸ್ತಾ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ ನಂ.1 : ಗೋಪಾಲ ಥಾಕು ಹರಿಕಂತ್ರ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ 1 : ಪಂಚನಾಮೆ
ನಿಶಾನೆ ಪಿ 1ಎ : ಪಂಚನಾಮೆ ಮೇಲಿನ ಸಹಿ
ನಿಶಾನೆ ಪಿ 2 : ಪ್ರ.ಮಾ. ವರದಿ
ನಿಶಾನೆ ಪಿ 3 : ರಾಸಾಯನಿಕ ವಿಶ್ಲೇಷಣಾ ವರದಿ

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್.995

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉ.ಕ. ಜಿಲ್ಲೆ ಕಾರವಾರ ರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಅಬಕಾರಿ/ ಡಿಟಿಸಿಆರ್/ 14/ 2001-02, ದಿನಾಂಕ: 30ನೇ ಜೂನ್, 2004**

**ಉಪಸ್ಥಿತರು:**

ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.

ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

| **ಫಿರ್ಯಾದುದಾರರು** | ವಿರುದ್ಧ | **ಆರೋಪಿಗಳು** |
|---|---|---|
| ಆರ್.ಕೆ. ಮೀನಾ,<br>ಸಬ್ ಇನ್ಸ್‌ಪೆಕ್ಟರ್, ಸಿ.ಐ.ಎಸ್.ಎಫ್, ಯುನಿಟ್,<br>ಕೈಗಾ, ಮಲ್ಲಾಪುರ. | | 1. ಅನಿಲ ರಾಮಚಂದ್ರ ಪಣಿಕರ್<br>ಸಾ: ಕುನ್ನಿಪೇಟೆ ಮಲ್ಲಾಪುರ.<br>2. ರಾಮಚಂದ್ರ ದಾಮೋದರ ಫಾಣಿಕಾರ್, ಎನ್.ಪಿ.ಸಿ. ಕೈಗಾ, ಸಾ: ಕುನ್ನಿಪೇಟೆ ಮಲ್ಲಾಪುರ<br>3. ಸೆಲ್ವರಾಜ್ ಯಾತ್ರಾನಾಯ್ಡು<br>ಸಾ: ಕುನ್ನಿಪೇಟೆ ಮಲ್ಲಾಪುರ |

**(ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಕಾರವಾರ ರವರು ಪ್ರತಿನಿಧಿಸಿದ್ದಾರೆ)**

**ಅರ್ಜಿದಾರರು:**

ಅನಿಲ ರಾಮಚಂದ್ರ ಫಾಣೆಕರ್

ಸಾ: ಕುನ್ನಿಪೇಟೆ ಮಲ್ಲಾಪುರ

(ಶ್ರೀ ಎನ್.ವಿ. ನಾಯಕ, ವಕೀಲರು, ಕಾರವಾರ ಪ್ರತಿನಿಧಿಸಿದ್ದಾರೆ)

ಈ ಆರೋಪವನ್ನು ಕ.ಅ. ಕಾಯ್ದೆ 1965ರ ಕಲಂ 34 ಮತ್ತು 38 ಎ ರಂತೆ ಹೊರಿಸಲಾಗಿದ್ದು, ಕಲಂ 43ಎ (2)ರಂತೆ ಜಪ್ತಿಯಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

**ತೀರ್ಪು**

1. ದಿನಾಂಕ: 19.04.2001ರಂದು ಸಬ್ ಇನ್ಸ್‌ಪೆಕ್ಟರ್, ಎನ್.ಪಿ.ಸಿ. ಕೈಗಾ ಇವರು ಬೆಳಿಗ್ಗೆ 7.00 ಗಂಟೆಯ ಸಮಯಕ್ಕೆ ಕಾರವಾರ ತಾಲ್ಲೂಕಿನ ಕೈಗಾ ರಸ್ತೆಯ ಮುಖ್ಯ ಗೇಟ್ ಹತ್ತಿರ ಆರೋಪಿಗಳು ಪ್ರಯಾಣಿಸುತ್ತಿದ್ದ ಹಿರೋಹೊಂಡಾ ಸ್ಪ್ಲೆಂಡರ್ ಮೋಟಾರ್ ಸೈಕಲ್ ಸಂಖ್ಯೆ: ಕೆಎ-30 ಜೆ-3654ನೇದನ್ನು ಸಂಶಯದಿಂದ ನಿಲ್ಲಿಸಿ ತಪಾಸಣೆ ಮಾಡಲಾಗಿ ಮೂರು ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಮಿ.ಲೀ. ನ ತಲಾ 48 ರಂತೆ ಒಟ್ಟು 144 ಕ್ಯಾಮರೋನ ಕೋಕೋನಟ್ ಫೆನ್ನಿ ಎಂಬ ಮದ್ಯದ ಸೀಸೆಗಳನ್ನು ಸಾಗಿಸುತ್ತಿದ್ದುದನ್ನು ಪತ್ತೆ ಹಚ್ಚಿ ಅವನ್ನು ಅನಧಿಕೃತವಾಗಿ ರಹದಾರಿ ಪತ್ರ ಹೊಂದದೇ ಸಾಗಿಸಿದ್ದು ಕಂಡುಬಂದಿದ್ದರಿಂದ ಸದರಿ ಮದ್ಯಸಾರದ ಸ್ವತ್ತುಗಳು ಹಾಗೂ ವಾಹನವನ್ನು ಮುಂದಿನ ಕ್ರಮದ ಕುರಿತು ಮಲ್ಲಾಪುರದ ಪೊಲೀಸ್ ಠಾಣೆಗೆ ಫಿರ್ಯಾದು ನೀಡಿದ ಪ್ರಕಾರ ಮಲ್ಲಾಪುರ ಪೊಲೀಸ್ ಠಾಣೆಯ ಪ್ರ.ಮಾ.ವರದಿ ಸಂಖ್ಯೆ: 4/2001 ದಿನಾಂಕ: 19.04.2001ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಹಾಗೂ ಗುನ್ನೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ (2) ರನ್ವಯ ಸರ್ಕಾರಕ್ಕೆ ಜಪ್ತಿಯಾದ ಸ್ವತ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಪಿ.ಎಸ್.ಐ. ಮಲ್ಲಾಪುರ ಇವರು ವಿನಂತಿಸಿರುತ್ತಾರೆ.

2. ದಿನಾಂಕ:30.04.2001ರಂದು ರಾಮಚಂದ್ರ ಡಿ. ಫಾಣೆಕರ್, ಸಾ: ಕುನ್ನಿಪೇಟ್, ಮಲ್ಲಾಪುರ ಇವರ ಪರವಾಗಿ ಶ್ರೀ ನಾಗರಾಜ ವಿ. ನಾಯಕ, ವಕೀಲರು, ಕಾರವಾರ ಇವರು ಜಪ್ತಿಯಾದ ವಾಹನದ ಆರ್.ಸಿ. ಪುಸ್ತಕದ ಝೆರಾಕ್ಸ್ ನಕಲಿನೊಂದಿಗೆ ಅರ್ಜಿ ಸಲ್ಲಿಸಿ, ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ಅರ್ಜಿದಾರರಿಗೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ದಿನಾಂಕ: 26.05.2001ರಂದು ವಾಹನದ ಮಧ್ಯಂತರ ಬಿಡುಗಡೆಯ ಅರ್ಜಿಯನ್ನು ಈ ಪ್ರಾಧಿಕಾರದಿಂದ ತಿರಸ್ಕರಿಸಲಾಗಿ, ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ ಪ್ರಕಾರ ಮಾನ್ಯ ಸೆಶನ್ಸ್ ನ್ಯಾಯಾಲಯ, ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 92/2001, ದಿನಾಂಕ: 11.07.2001ರಂತೆ ವಾಹನದ ಬೆಲೆಯ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಅದನ್ನು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಆದೇಶಿಸಿದ ಪ್ರಕಾರ ರೂ. 31,000/-ಗಳ ಬ್ಯಾಂಕ್ ಗ್ಯಾರಂಟಿಯನ್ನು ಸಿಂಡಿಕೇಟ್ ಬ್ಯಾಂಕ್, ಮಲ್ಲಾಪುರ ಶಾಖೆ ಇವರಿಂದ ಪಡೆದು ದಿನಾಂಕ: 14.12.2001ರಂದು ಬಿಡುಗಡೆ ಮಾಡಲಾಗಿರುತ್ತದೆ.

4. ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ತನಿಖಾಧಿಕಾರಿಗಳು ಈ ಪ್ರಾಧಿಕಾರದಲ್ಲಿ ಹಾಜರುಪಡಿಸಿದ್ದು, ದಿನಾಂಕ: 23.05.2001ರಂದು ನ್ಯಾಯ ವಿಜ್ಞಾನ ಪ್ರಯೋಗಶಾಲೆಯ ವೈಜ್ಞಾನಿಕ ಅಧಿಕಾರಿಗಳು, ಬೆಂಗಳೂರು ಇವರು ನೀಡಿದ ವರದಿಯಲ್ಲಿ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳಲ್ಲಿ ಶೇಕಡಾ 42 ವಿ/ವಿ ಯಷ್ಟು ಆಲ್ಕೋಹಾಲ್ 25 ಸೆಂಟಿ ಗ್ರೇಡ್‌ಗಳಲ್ಲಿ ಪತ್ತೆ ಆಗಿರುತ್ತದೆಂದು ವರದಿಸಿರುತ್ತಾರೆ.

5. ಈ ಪ್ರಕರಣವನ್ನು ದಾಖಲಿಸಿ 30 (ಮೂವತ್ತು) ದಿನಗಳು ಕಳೆದ ತರುವಾಯವೂ ಜಪ್ತಿಯಾದ ಗೋವಾ ಸಾರಾಯಿ ಮತ್ತು ಮದ್ಯದ ಸ್ವತ್ತುಗಳು ತನ್ನದೆಂದು ಕೋರಿ ಯಾರೂ ತನ್ನ ಹಕ್ಕನ್ನು ಸ್ಥಾಪಿಸಿ ಅರ್ಜಿಯನ್ನು ಈ ಪ್ರಾಧಿಕಾರದಲ್ಲಿ ಸಲ್ಲಿಸದಿದ್ದ ಕಾರಣಕ್ಕಾಗಿ ಕ.ಅ. ಕಾಯ್ದೆ 1965 ಕಲಂ 43-ಎ (2) ರನ್ವಯ ದಿನಾಂಕ: 04.03.2002 ರಂದು ಸದರಿ ಮದ್ಯಸಾರದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ವಿಲೇವಾರಿಗೆ ಆದೇಶಿಸಲಾಗಿರುತ್ತದೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ-1(ಸಿ) ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯೂ-1 ರಿಂದ 3 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ-1 ರಿಂದ ಪಿ-3 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಿಬ್ಬರೂ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

7. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡು ಬಂದಿದ್ದರಿಂದ ದಂಡ ಪ್ರಕ್ರಿಯೆ ಸಂಹಿತೆ ಕಲಂ-313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ಪಡೆದುಕೊಳ್ಳಲಾಯಿತು. ಯಾವುದೇ ನಿಶಾನೆಗಳನ್ನು ಗುರ್ತಿಸಿಕೊಂಡಿರುವುದಿಲ್ಲ.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎನ್.ವಿ. ನಾಯಕ, ವಕೀಲರು ಕಾರವಾರ ರವರು ಮಂಡಿಸಿದ ಲಿಖಿತ ವಾದ ವಿವಾದಗಳನ್ನು ಪರಾಂಬರಿಸಲಾಯಿತು. ಕಡತದಲ್ಲಿ

ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬರುತ್ತದೆ.

**9. ವಿವಾದಾಂಶಗಳು:**

1. ದಿನಾಂಕ: 19.04.2001ರಂದು ಬೆಳಿಗ್ಗೆ 7-00 ಗಂಟೆಯ ಸಮಯಕ್ಕೆ ಕಾರವಾರ ತಾಲ್ಲೂಕಿನ ಕೈಗಾ ರಸ್ತೆಯ ಮುಖ್ಯ ಗೇಟ್ ಹತ್ತಿರ ಮೂವರು ಆರೋಪಿಗಳು ಪ್ರಯಾಣಿಸುತ್ತಿದ್ದ ಹಿರೋಹೊಂಡಾ ಸ್ಪ್ಲೆಂಡರ್ ಮೋಟಾರ್ ಸೈಕಲ್ ಸಂಖ್ಯೆ: ಕೆಎ-30/ ಜೆ-3654 ನೇದರಲ್ಲಿ ಅಕ್ರಮವಾಗಿ 180 ಮಿ.ಲೀ. ನ 144 ಕ್ಯಾಮರೊನ್ ಫೆನ್ನಿಯ ಸೀಸೆಗಳನ್ನು 3 ಬಾಕ್ಸ್‌ಗಳಲ್ಲಿ ಸಾಗಿಸುತ್ತಿದ್ದರೇ? ಅಥವಾ ಇಲ್ಲವೇ

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮವಾಗಿ ಫೆನ್ನಿ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ? ಅಥವಾ ಇಲ್ಲವೇ

ಅಂಶ-1 : ಸಕಾರಾತ್ಮಕವಾಗಿ

ಅಂಶ-2 : ನಕಾರಾತ್ಮಕವಾಗಿ

ಅಂಶ-3 : ಸಕಾರಾತ್ಮಕವಾಗಿ

**ಕಾರಣಗಳು**

10. ಒಂದನೇಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಸಾಕ್ಷಿದಾರರಾದ ಈ ಪ್ರಕರಣದ ಫಿರ್ಯಾದುದಾರರಾದ ಆರ್.ಕೆ. ಮೀನಾ, ಸಬ್ ಇನ್ಸ್‌ಪೆಕ್ಟರ್, ಸಿ.ಐ.ಎಸ್.ಎಫ್. ಇವರು ದಿನಾಂಕ: 25.09.2002ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-1 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಯಲ್ಲಿ ತಾನು ನೀಡಿರುವ ಫಿರ್ಯಾದಿನಂತೆ ಸರಿಯಾಗಿಯೇ ಉತ್ತರಿಸುತ್ತಾ, ಫಿರ್ಯಾದಿನಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ತಾನು ಮಲ್ಲಾಪುರ ಪೊಲೀಸ್ ಠಾಣೆಗೆ ಫಿರ್ಯಾದನ್ನು ನೀಡುವಾಗ ಸುಮಾರು 12-00 ಗಂಟೆಯಾಗಿತ್ತೆಂದೂ, ಎಂ.ಪಿ.ಸಿ. ಕಛೇರಿಯಲ್ಲಿ ದೂರವಾಣಿ ಸೌಲಭ್ಯವಿದೆ ಎಂದೂ, ತನ್ನ ಜೊತೆ ಇಬ್ಬರು ಜವಾನರು ಇದ್ದರೆಂದೂ, ಆ ದಿವಸ ಫೋನ್ ಮೂಲಕ ದೂರನ್ನು ನೀಡಬಹುದಾಗಿತ್ತೆಂದೂ, ನಾವುಗಳು ಇಂತಹದೇ ವೇಳೆಯಲ್ಲಿ, ಇಂತಹದೇ ಸ್ಥಳದಲ್ಲಿ ಡ್ಯೂಟಿಯಲ್ಲಿ ಇರುತ್ತೇವೆ ಎನ್ನುವ ಬಗ್ಗೆ ರಿಜಿಸ್ಟರ್‌ನಲ್ಲಿ ನಮೂದಾಗಿರುತ್ತದೆಂದೂ, ಆ ದಿನವು ಸಹ ತಾನು ರಿಜಿಸ್ಟರ್‌ನಲ್ಲಿ ಸಹಿ ಮಾಡಿದ್ದೆನೆಂದೂ, ಪೊಲೀಸ್‌ರಿಗೆ ಫಿರ್ಯಾದನ್ನು ತಾನೇ ಸ್ವತಃ ಇಂಗ್ಲೀಷ್ ಬರವಣಿಗೆಯಲ್ಲಿ ನೀಡಿದ್ದೇನೆಂದೂ, ಅರ್ಜಿದಾರರ ವಕೀಲರು ತನಗೆ ಇಂಗ್ಲೀಷ್‌ನಲ್ಲಿ ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರಿಸಲು ಬರುವುದಿಲ್ಲವೆಂದೂ, ತನಗೆ ಇಂಗ್ಲೀಷ್ ಬರುತ್ತದೆಂದೂ, ಘಟನೆ ನಡೆದ ಸಂದರ್ಭದಲ್ಲಿ ಆ ಸ್ಥಳದಲ್ಲಿ ತಾನು ಮತ್ತು ಇಬ್ಬರು ಜವಾನರನ್ನು ಹೊರತುಪಡಿಸಿ, ಬೇರೆ ಯಾರೂ ಇರಲಿಲ್ಲವೆಂದೂ, ಸದರಿ ಸ್ಥಳದಲ್ಲಿ ಜನರು ತಿರುಗಾಡುವಂತಹ ರಸ್ತೆಯಾಗಿದ್ದು, ಆ ಸಮಯದಲ್ಲಿ ತನ್ನ ಹತ್ತಿರ ಯಾವುದೇ ಬಾಟ್ಲಿ ಇರಲಿಲ್ಲವೆಂದೂ, ತಾನು ಆ ಸಮಯದಲ್ಲಿ ಯಾವುದೇ ಬಾಟ್ಲಿಯನ್ನು ಖರೀದಿಸಿರಲಿಲ್ಲವೆಂದೂ, ವಾಹನವನ್ನು ಶೋಧಿಸುವುದಕ್ಕೆ ಮುನ್ನ ಯಾವುದೇ ಮ್ಯಾಜಿಸ್ಟ್ರೇಟರಿಂದ ಸರ್ಚ್‌ವಾರಂಟ್‌ನ್ನು ಪಡೆದಿಲ್ಲವೆಂದೂ, ಈ ಪ್ರಕರಣದಲ್ಲಿನ ಆರೋಪಿಗಳು ಮೊದಲು ತನಗೆ ಪರಿಚಯವಿರಲಿಲ್ಲವೆಂದೂ, ತಾನು ಆ ದಿವಸ ಡ್ಯೂಟಿ ಮಾಡುತ್ತಿದ್ದುದು ಎರಡನೇ ಕಂಪೌಂಡಿನಲ್ಲಿ ಸದರಿ ಗುನ್ನೆಯು ಸಹ ಎರಡನೇ ಕಂಪೌಂಡಿನಲ್ಲಿ ಸಂಭವಿಸಿದೆ ಎಂದು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ನಿರ್ದೋಷಿಯಾಗಿರುವ ಬಗ್ಗೆ ತನಗೆ ತಿಳಿದಿಲ್ಲವೆಂದೂ, ಇಲಾಖೆಯಿಂದ ಬಹುಮಾನ ದೊರಕುವ ಇಚ್ಛೆಯಿಂದ ಸುಳ್ಳು ಪ್ರಕರಣವನ್ನು ಸೃಷ್ಟಿಸಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

11. ಈ ಸಾಕ್ಷಿದಾರರು ಫಿರ್ಯಾದನ್ನು 12-00 ಗಂಟೆಗೆ ನೀಡಿರುವುದು ಲಭ್ಯವಿರುವ ದಾಖಲೆಯಿಂದ ಕಂಡು ಬರುತ್ತದೆ. ಸಿ.ಐ.ಎಸ್.ಎಫ್. ಅಧಿಕಾರಿಯಾಗಿರುವುದರಿಂದ ಅವರ ವ್ಯಾಪ್ತಿಯಲ್ಲಿ ಕಂಡು ಬರುವ ಯಾವುದೇ ರೀತಿಯ ಕಾನೂನು ಬಾಹಿರ ಕೃತ್ಯಗಳನ್ನು ಕಂಡು ಹಿಡಿಯುವುದು ಅವರ ಕರ್ತವ್ಯವಾಗಿರುವುದರಿಂದ ಆ ಬಗ್ಗೆ ದೂರವಾಣಿ ಮೂಲಕ ಪೊಲೀಸ್‌ರಿಗೆ ದೂರು ನೀಡಬೇಕಾಗಿರುವುದು ಸಮಂಜಸವೆಂದು ಕಂಡು ಬರುವುದಿಲ್ಲ. ಆ ದಿನ ಸದರಿ ಸಾಕ್ಷಿದಾರರು ಆ ಸ್ಥಳದಲ್ಲಿ ಕರ್ತವ್ಯದಲ್ಲಿ ಇರಲಿಲ್ಲ ಎನ್ನುವ ಬಗ್ಗೆ ಎದುರುದಾರರ ಪಕ್ಷದವರು ಯಾವುದೇ ದಾಖಲೆಗಳನ್ನು ತರಿಸಿಕೊಂಡಿಲ್ಲ ಮತ್ತು ಹಾಜರುಪಡಿಸಿಲ್ಲ. ಈ ಸಾಕ್ಷಿದಾರರು ಚೆನ್ನಾಗಿ ಇಂಗ್ಲೀಷ್ ಬಲ್ಲವರಲ್ಲವೆಂದು ಅವರ ಫಿರ್ಯಾದಿನ ಮೂಲಕ ಕಂಡು ಬರುತ್ತದೆ. ಹೀಗಾಗಿ ಇಂಗ್ಲೀಷ್‌ನಲ್ಲಿ ಪ್ರಶ್ನೆ ಕೇಳಿದರೆ ಉತ್ತರಿಸಲು ಆಗುವುದಿಲ್ಲ ಎಂದು ನುಡಿದಿರಬಹುದು. ಈ ಪ್ರಕರಣದಲ್ಲಿ ಮಾದರಿ ಸೀಸೆಗಳನ್ನು ಜಪ್ತಿಯಾದಂತಹ ಸೀಲ್ಡ್ ಬಾಟ್ಲಿಗಳಿಂದಲೇ ತೆಗೆದಿರುವುದು ಕಂಡುಬರುವುದರಿಂದ ಬಾಟ್ಲಿಯನ್ನು ತರುವ ಪ್ರಶ್ನೆ ಉದ್ಭವಿಸುವುದಿಲ್ಲ. ಈ ಪ್ರಕರಣದ ಬಗ್ಗೆ ವರ್ತಮಾನವಿರದೇ ಕರ್ತವ್ಯದಲ್ಲಿದ್ದಾಗ ಅಕಸ್ಮಾತಾಗಿ ವಾಹನವನ್ನು ಹಿಡಿದಿದ್ದರಿಂದ ಸಾಕಷ್ಟು ಸಮಯಾವಕಾಶವಿಲ್ಲದಿದ್ದ ಪ್ರಯುಕ್ತ ಆರೋಪಿಗಳು ಪರಾರಿಯಾಗಬಹುದೆಂಬ ಕಾರಣ ಮತ್ತು ಮುದ್ದೆ ಮಾಲುಗಳನ್ನು ಪರಬಾರೆ ಮಾಡಬಹುದೆಂಬ ಕಾರಣಗಳಿಂದ ವಾರಂಟನ್ನು ತೆಗೆದುಕೊಳ್ಳಲು ಪಿ.ಡಬ್ಲ್ಯೂ-1 ರವರಿಗೆ ಸಾಧ್ಯವಾಗಲಿಲ್ಲವೆಂದು ಕಂಡುಬರುತ್ತದೆ. ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಮುಟ್ಟುಗೋಲು ನಡಾವಳಿಯಲ್ಲಿ ಇದನ್ನು ಪರಿಗಣಿಸಲು ಕಲಂ 43-ಎ (2) ರಡಿಯಲ್ಲಿ ಅವಕಾಶ ಇರುವುದಿಲ್ಲ. ಈ ಪ್ರಕರಣ ದಾಖಲಿಸಿದಾಗ ಇಲಾಖೆಯಿಂದ ಪಿ.ಡಬ್ಲ್ಯೂ-1 ರವರಿಗೆ ಬಹುಮಾನ ದೊರೆತ ಬಗ್ಗೆ ಎದುರುದಾರರ ಪಕ್ಷದವರು ಯಾವುದೇ ದಾಖಲೆಗಳನ್ನು ಹಾಜರುಪಡಿಸಿಲ್ಲ.

12. ಅದೇ ದಿನ ದಿನಾಂಕ: 25.09.2002ರಂದು ಈ ಪ್ರಕರಣದ ಪಂಚ ಸಾಕ್ಷಿ ನಂ. 2 ನೇಯವರಾದ ರಾಜೇಶ ಗಣಪತಿ ನಾಯ್ಕ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-2ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಪ್ರತಿಕೂಲ ಸಾಕ್ಷಿಯನ್ನು ನುಡಿದು, ನಂತರ ಮಾನ್ಯ ಎಡಿಪಿಯವರ ಪಾಟಿ ಸವಾಲಿನಲ್ಲಿ ವಾಹನ ಮತ್ತು ಮದ್ಯಸಾರದ ಸ್ವತ್ತುಗಳು ಅಲ್ಲಿ ಇರಲಿಲ್ಲ. ಈ ವಸ್ತುಗಳನ್ನು ಜಪ್ತು ಮಾಡಿದರು ಮತ್ತು ಆ ಬಗ್ಗೆ ಪಂಚನಾಮೆ ತಯಾರಿಸಿದರು ಮತ್ತು ಅದಕ್ಕೆ ತಾನೇ ಸಹಿ ಮಾಡಿದ್ದೇನೆ ಎನ್ನುವುದು ಸರಿ ಎಂದೂ, ತಾನು ಎಸ್.ಎಸ್.ಎಲ್.ಸಿ. ವರೆಗೆ ಓದಿದ್ದು, ಯಾವುದೇ ಕಾಗದಪತ್ರಕ್ಕೂ ಸಹಿ ಮಾಡಬೇಕಾದರೆ ತಾನು ಓದಿ ತಿಳಿದುಕೊಂಡೇ ಸಹಿ ಮಾಡುತ್ತೇನೆನ್ನುವುದು ಸರಿ ಎಂದೂ, ಬರೆದ ಕಾಗದಕ್ಕೆ ತಾನು ಸಹಿ ಮಾಡಿದ್ದೇನೆಂದೂ, ನಂತರ ಅರ್ಜಿದಾರರ ಪರ ವಕೀಲರ ಮರು ಸವಾಲಿನಲ್ಲಿ ಸಾಮಾನ್ಯವಾಗಿ ಪೊಲೀಸರಿಗೆ ಅವರು ಹೇಳಿದ ಹಾಗೆ ಕೇಳದಿದ್ದರೆ ಸಿಟ್ಟು ಬರುತ್ತದೆಂದೂ, ಆ ದಿನ ಸಹಿ ಹಾಕುವುದಿಲ್ಲವೆಂದು ಹೇಳಿದರೆ ತನಗೆ ಜೋರು ಮಾಡುತ್ತಿದ್ದರೆಂದು ನುಡಿದಿರುತ್ತಾರೆ. ಈ ಪ್ರಕರಣದ ಇನ್ನೊಬ್ಬ ಪಂಚ ಸಾಕ್ಷಿದಾರರಾದ ಕೃಷ್ಣ ಭಿಕ್ಕು ಅಸ್ನೋಟಿಕರ್ ಇವರು ದಿನಾಂಕ: 30.04.2003 ರಂದು ತನ್ನ ಅರ್ಜಿಯನ್ನು ಪ್ರಾಧಿಕಾರದಲ್ಲಿ ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ತನ್ನನ್ನು ಪಂಚಸಾಕ್ಷಿ ನಂ. 1ನೇ ಯವನೆಂದು ಸಹಿ ಪಡೆದಿರುವುದು ತಿಳಿದು ಬರುತ್ತದೆಂದೂ, ಆದರೆ ಸದರಿ ದಿನದಂದು ಪಿ.ಎಸ್.ಐ. ರವರು ತನಗೆ ಯಾವುದೋ ಬೇರೆ ಕಾರಣವನ್ನು ಹೇಳಿ ಖಾಲಿ ಹಾಳೆಯ ಮೇಲೆ ಸಹಿ ಪಡೆದಿರುತ್ತಾರೆಂದೂ, ಪಂಚನಾಮೆ ಮಾಡಿದ ಬಗ್ಗೆಯಾಗಲೀ, ಗುನ್ಹೆ ಜರುಗಿದ ಬಗೆಯಾಗಲೀ ತನಗೇನು ಗೊತ್ತಿರುವುದಿಲ್ಲವೆಂದೂ, ತಾನು ಗುನ್ಹಾ ಸ್ಥಳಕ್ಕೆ ಹೋಗಿರಲಿಲ್ಲವೆಂದೂ, ಸ್ಥಳದಲ್ಲಿ ಪಂಚನಾಮೆ ಮಾಡಿದ ಬಗ್ಗೆ ತನಗೇನು ತಿಳಿದಿರಲಿಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

13. ಪಿ.ಡಬ್ಲ್ಯೂ-2 ನೇಯವರು ಠಾಣೆಯಲ್ಲಿ ಫಿರ್ಯಾದುದಾರರು ಮತ್ತು ಮುದ್ದೆಮಾಲುಗಳು ಇರಲಿಲ್ಲವಾದರೂ, ಅವುಗಳನ್ನು ಜಪ್ತು ಮಾಡಿ, ಪಂಚನಾಮೆ ತಯಾರಿಸಿದರೆಂದು ಗೊಂದಲಮಯವಾಗಿ ಉತ್ತರಿಸಿರುತ್ತಾರೆ. ಅಲ್ಲದೇ ತಾನು ಓದು-ಬರಹ ಬಲ್ಲವನಾಗಿರುವುದಾಗಿ ತಿಳಿಸಿರುತ್ತಾರೆ. ಹೀಗಾಗಿ ಸದರಿ ಸಾಕ್ಷಿದಾರರು ಪ್ರಕರಣವನ್ನು ಮರೆಮಾಚಿ, ಸುಳ್ಳು ಸಾಕ್ಷಿ ನುಡಿದಿರುವುದು ವ್ಯಕ್ತವಾಗುತ್ತದೆ. ಪೊಲೀಸ್‌ರು ಜೋರು ಮಾಡಿ, ಪಂಚನಾಮೆಗೆ ಸಹಿ ಹಾಕಿಸುವುದಾದಲ್ಲಿ ಇದೇ ಸಾಕ್ಷಿದಾರರಿಗೆ ಏಕೆ ಕರೆಸಿದರು ಎನ್ನುವ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ ಹಾಗೂ ಜೋರು ಮಾಡಿದ ಬಗ್ಗೆ ಮೇಲಾಧಿಕಾರಿಗಳಿಗೆ ಏಕೆ ತಿಳಿಸಿಲ್ಲ ಎನ್ನುವ ಬಗ್ಗೆ ವಿವರಿಸಿರುವುದಿಲ್ಲ.

14. ಈ ಪ್ರಕರಣದ ತನಿಖಾಧಿಕಾರಿಯಾದ ಎಸ್.ಬಿ. ಯಾದಗುಡೆ, ಪಿ.ಎಸ್.ಐ.ರವರು ದಿನಾಂಕ: 17.12.2003ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಸಾಕ್ಷಿ ನುಡಿಯುತ್ತಾ, ಮಾನ್ಯ ಎ.ಡಿ.ಪಿ. ಯವರ ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಯಂತೆ ಸರಿಯಾಗಿಯೇ ಉತ್ತರಿಸಿರುತ್ತಾರೆ. ಅನಂತರ ಎದುರುದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಎದುರುದಾರರ ಪಕ್ಷದವರಿಗೆ ಸಹಕಾರಿಯಾಗುವಂತಹ ಯಾವುದೇ ಪ್ರಶ್ನೆಯನ್ನು ಕೇಳಿದ್ದು ಕಂಡು ಬರುವುದಿಲ್ಲ. ಆದುದರಿಂದ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ವಾಹನದಲ್ಲಿ ಅಕ್ರಮವಾಗಿ ಫೆನ್ನಿಯ ಪೆಟ್ಟಿಗೆಗಳನ್ನು ಸಾಗಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಬಲವಾಗಿ ಸಮರ್ಥಿಸಿರುವುದು ಹಾಗೂ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬಂದಿರುವುದರಿಂದ ಒಂದನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

15. ದಿನಾಂಕ: 07.01.2004ರಂದು ಅರ್ಜಿದಾರರಾದಂತಹ ರಾಮಚಂದ್ರ ದಾಮೋದರ ಫಣೇಕರ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತಮ್ಮ ಸಾಕ್ಷ್ಯವನ್ನು ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ನುಡಿಯುತ್ತಾ, ತನ್ನ ಗಾಡಿಯಲ್ಲಿ ಅಕ್ರಮ ಸಾರಾಯಿಯನ್ನು ಎಂದಿಗೂ ಸಾಗಾಟ ಮಾಡಿರುವುದಿಲ್ಲವೆಂದೂ, ತನ್ನ ತಿಳುವಳಿಕೆ ಇದ್ದು ಅಕ್ರಮ ಸಾರಾಯಿಯನ್ನು ತನ್ನ ವಾಹನದಲ್ಲಿ ಸಾಗಾಟ ಮಾಡಿಲ್ಲವೆಂದೂ, ಸಾರಾಯಿಗೂ ಮತ್ತು ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ನುಡಿದಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ. ಯವರ ಪಾಟಿ ಸವಾಲಿನಲ್ಲಿ ಸದರಿ ಮೋಟಾರ ಸೈಕಲನ್ನು ತನ್ನನ್ನು ಬಿಟ್ಟು ಯಾರು ಓಡಿಸುವುದಿಲ್ಲವೆಂದೂ, ದಿನಾಂಕ: 19.04.2001ರಂದು ಅದು ತನ್ನ ತಾಬಾದಲ್ಲಿಯೇ ಇತ್ತೆಂದೂ, ಅದನ್ನು 19.04.2001ರಂದು ಸಿ.ಐ.ಎಸ್.ಎಫ್. ಸಬ್ ಇನ್ಸ್‌ಪೆಕ್ಟರ್ ತೆಗೆದುಕೊಂಡು ಹೋದರೆನ್ನುವುದು ಸರಿಯಲ್ಲವೆಂದೂ, ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಿಸುತ್ತಿದ್ದುದರಿಂದ ಮಲ್ಲಾಪುರ ಪೊಲೀಸ್ ಠಾಣೆಯವರು ಜಪ್ತು ಮಾಡಿ ಇಲ್ಲಿ ಹಾಜರುಪಡಿಸಿದರು ಎಂಬುದು ತನಗೆ ಗೊತ್ತಿಲ್ಲವೆಂದೂ, ಮಲ್ಲಾಪುರ ಪೊಲೀಸರಿಗೂ ತನಗೂ ಯಾವುದೇ ಪರಿಚಯವಿಲ್ಲವೆಂದೂ, ಮತ್ತು ವೈಮನಸ್ಸೂ ಇರುವುದಿಲ್ಲವೆಂದೂ, ಸಾರಾಯಿಯನ್ನು ಸಾಗಿಸಿದ್ದೆ ಎಂದು ಒಪ್ಪಿಕೊಂಡರೆ ತನ್ನ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ ಎಂಬ ಕಾರಣದಿಂದ ಸುಳ್ಳು ಸಾಕ್ಷಿಯನ್ನು ನುಡಿಯುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

16. ಅರ್ಜಿದಾರರು ಪ್ರಕರಣ ಸಂಭವಿಸಿದ ದಿನದಂದು ವಾಹನವು ತನ್ನ ವಶದಲ್ಲಿ ಇದ್ದುದನ್ನು ಒಪ್ಪಿಕೊಂಡಿರುತ್ತಾರೆ. ಅಲ್ಲದೇ ಮೂವರು ಆರೋಪಿಗಳ ಪೈಕಿ ಇವರು ಸಹ ಒಬ್ಬರಾಗಿರುತ್ತಾರೆ. ಸಿ.ಐ.ಎಸ್.ಎಫ್. ನವರು ತೆಗೆದುಕೊಂಡು ಹೋಗಿರದಿದ್ದಲ್ಲಿ ಮತ್ತು ಮಲ್ಲಾಪುರ ಪೊಲೀಸ್ ಠಾಣೆಯವರಿಗೂ, ಅರ್ಜಿದಾರರಿಗೂ ಯಾವುದೇ ವೈಮನಸ್ಸೂ ಇರದಿದ್ದಲ್ಲಿ, ವಾಹನವು ಎರಡು ತಿಂಗಳುಗಳ ಕಾಲ ಮಲ್ಲಾಪುರ ಪೊಲೀಸ್ ಠಾಣೆಯಲ್ಲಿ ಏಕೆ ಉಳಿಯಿತು ಮತ್ತು ಅದನ್ನು ಪ್ರಾಧಿಕಾರದಿಂದ ಹೇಗೆ ಬಿಡಿಸಿಕೊಂಡರು ಎಂಬ ಬಗ್ಗೆ ವಿವರಿಸಿಲ್ಲ. ಈ ಎಲ್ಲಾ ಕಾರಣಗಳಿಂದ ವಾಹನದ ಮಾಲೀಕರು ಈ ಘಟನೆ ಸಂಭವಿಸಿದ ದಿನ ತಾನು ಶಾಮೀಲಾಗಿಯೇ ಮತ್ತು ಅವರಿಗೆ ಅರಿವಿದ್ದುಕೊಂಡೇ ಇನ್ನಿಬ್ಬರೊಂದಿಗೆ ಸದರಿ ವಾಹನದಲ್ಲಿ ಫೆನ್ನಿಯ ಪೆಟ್ಟಿಗೆಗಳನ್ನು ಸಾಗಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

17. ವಾದವಿವಾದದ ಸಮಯದಲ್ಲಿ ಎದುರುದಾರರ ಪರ ವಕೀಲರು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ಕೆ.ಎಲ್. ಸುಬ್ಬಯ್ಯ ವಿರುದ್ಧ ಕರ್ನಾಟಕ ಸರ್ಕಾರ (ಕೆ.ಎಲ್.ಜೆ. -1979 ಪುಟ ಸಂಖ್ಯೆ: 410) ನೇದನ್ನು ಹಾಜರು ಪಡಿಸಿರುತ್ತಾರೆ. ಈ ತೀರ್ಪಿನಲ್ಲಿ ಕಲಂ 54 ನೇದನ್ನು ಪಾಲಿಸದಿದ್ದ ಕಾರಣ ಕಾರ್ಯವ್ಯಾಪ್ತಿ ಇಲ್ಲದೇ ಅನ್ವೇಷಣೆಯನ್ನು ಮಾಡಿರುವುದು ಕಂಡು ಬರುವುದರಿಂದ ಆರೋಪಿಯನ್ನು ಬಿಡುಗಡೆಗೊಳಿಸಲಾಗಿರುತ್ತದೆ. ಆದರೆ ಇದು ಕ್ರಿಮಿನಲ್ ಪ್ರಕರಣಕ್ಕೆ ಸಂಬಂಧಿಸಿದ ತೀರ್ಪಾಗಿದ್ದು, ಅದನ್ನು ಮುಟ್ಟುಗೋಲು ಪ್ರಕರಣದಲ್ಲಿ ಪರಿಗಣಿಸಲು ಬರಲಾರದು. ಏಕೆಂದರೆ ಇದೇ ಸಂದರ್ಭದಲ್ಲಿ ಮಾನ್ಯ ಎಡಿಪಿ ಯವರು ಸಲ್ಲಿಸಿರುವ ಮಾನ್ಯ

ಉಚ್ಚ ನ್ಯಾಯಾಲಯ, ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯಕುಮಾರ ವಿರುದ್ಧ ಡೆಪ್ಯೂಟಿ ಕನ್ಸ್‌ರ್ವೇಟರ್ ಆಫ್ ಫಾರೆಸ್ಟ್ ಹಾಸನ (ಐಎಲ್ಆರ್ 2002, ಕೆ.ಎ.ಆರ್. 1375) ನೇದನ್ನು ಹಾಜರುಪಡಿಸಿದ್ದು, ಅದರಲ್ಲಿ ಆರೋಪಿ ತಾನು ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿದ್ದರೂ ಸಹ ಆ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ನಿಯಮಗಳಡಿಯಲ್ಲಿ ಸೂಚಿಸಿದಂತೆ ಸರ್ಕಾರಕ್ಕೆ ಮುಟ್ಟುಗೋಲು ಪ್ರಕ್ರಿಯೆಯ ಅಧಿಕಾರ ವ್ಯಾಪ್ತಿ ಕುಂಠಿತಗೊಳ್ಳುವುದಿಲ್ಲ ಎಂದು ತೀರ್ಪಾಗಿರುತ್ತದೆ.

18. ಸರ್ಕಾರದ ಪರವಾಗಿ ಸಲ್ಲಿಸಿರುವ ಮಾನ್ಯ ಉಚ್ಚ ನ್ಯಾಯಾಲಯದ ಇನ್ನೊಂದು ತೀರ್ಪು ಅಬಕಾರಿ ನಿರೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಇತರರು ವಿರುದ್ಧ ಡಿ. ವೆಂಕಟರಮಣ ಸ್ವಾಮಿ (ಕೆ.ಸಿ. ಆ್ಯಂಡ್ ಸಿ.ಆರ್. 2003 (1) ಪುಟ ಸಂಖ್ಯೆ: 189) ರಲ್ಲಿ ವಾಹನದ ಪ್ರಭಾರವನ್ನು ಹೊಂದಿದಂತಹವನು ಕಾನೂನನ್ನು ಉಲ್ಲಂಘಿಸಿ, ಕರ ತಪ್ಪಿಸಿದ ಸ್ವತ್ತುಗಳ ಸಾಗಾಟದಲ್ಲಿ ತೊಡಗಿದಾಗ, ಆ ವಾಹನದ ಮಾಲೀಕನು ಪರಾನುಭವದ ಹೊಣೆಗಾರನಾಗಬೇಕಿದ್ದು, ಈ ರೀತಿಯ ತಪ್ಪಿಗಾಗಿ ಆತನು ಮುಟ್ಟುಗೋಲಿನಂತಹ ಪರಿಣಾಮವನ್ನು ಎದುರಿಸಬೇಕಾಗುತ್ತದೆಂದು ತೀರ್ಪಾಗಿರುತ್ತದೆ.

19. **ಮೂರನೇಯ ವಿವಾದಾಂಶ:** ಮೊದಲನೆಯ ಮತ್ತು ಎರಡನೇಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಮತ್ತು ಮಾನ್ಯ ಉಚ್ಚ ನ್ಯಾಯಾಲಯದ ಮೇಲ್ಕಾಣಿಸಿದ ಎರಡು ತೀರ್ಪುಗಳನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನದಲ್ಲಿ ಫೆನ್ನಿಯನ್ನು ವಾಹನದ ಮಾಲೀಕನು ತಾನು ಶಾಮೀಲಾಗಿ ಮತ್ತು ತನಗೆ ಅರಿವಿದ್ದುಕೊಂಡೇ ಸಾಗಿಸಿರುವುದು ಸಾಬೀತಾಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ (1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಲ್ಲಾಪುರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 04/2001 ದಿನಾಂಕ: 19.04.2001ರಲ್ಲಿ ಜಪ್ತಾದ ಹಿರೋಹೊಂಡಾ ಸ್ಪ್ಲೆಂಡರ್ ಮೋಟಾರ್ ಸೈಕಲ್ ಸಂಖ್ಯೆ: ಕೆಎ-30/ ಜೆ-3654 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಜೂನ್ ತಿಂಗಳ 30ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿಗೆ ಬರುವುದು.

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ. ನಂ. 1 : ಆರ್.ಕೆ. ಮೀನಾ, ಸಬ್ ಇನ್ಸ್‌ಪೆಕ್ಟರ್ ಸಿ.ಐ.ಎಸ್.ಎಫ್.
ಪ್ರಾ.ಸಾ. ನಂ. 2 : ರಾಜೇಶ ಗಣಪತಿ ನಾಯ್ಕ
ಪ್ರಾ.ಸಾ. ನಂ. 3 : ಎಸ್.ಬಿ. ಯಾದಗುಡೆ, ಪಿ.ಎಸ್.ಐ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ ನಂ.1 : ರಾಮಚಂದ್ರ ದಾಮೋದರ ಫಣೇಕರ್

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ 1 : ಫಿರ್ಯಾದು
ನಿಶಾನೆ ಪಿ 1ಎ : ತನಿಖಾಧಿಕಾರಿಯ ಸಹಿ
ನಿಶಾನೆ ಪಿ 2 : ಪಂಚನಾಮೆ
ನಿಶಾನೆ ಪಿ 2ಎ : ತನಿಖಾಧಿಕಾರಿಯ ಸಹಿ
ನಿಶಾನೆ ಪಿ 2ಬಿ : ಪಂಚಸಾಕ್ಷಿಯ ನಂ.1 ನೇಯವರ ಸಹಿ
ನಿಶಾನೆ ಪಿ 2ಸಿ : ಪಂಚಸಾಕ್ಷಿಯ ನಂ.2ನೇಯವರ ಸಹಿ
ನಿಶಾನೆ ಪಿ 3 : ರಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ 3ಎ : ತನಿಖಾಧಿಕಾರಿಯ ಸಹಿ

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್.996

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉ.ಕ. ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 142/ 2000-01, ದಿನಾಂಕ: 30ನೇ ಜೂನ್, 2004**

**ಉಪಸ್ಥಿತರು:**

ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು**

ಶ್ರೀ ವಿ.ಬಿ. ಗಾಂವಕರ್,

ಸಿ.ಪಿ.ಐ. ಹೊನ್ನಾವರ.

(ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಆರೋಪಿಗಳು**

1. ಜೀವು ಸುಬ್ಬು ಹರಿಕಂತ್ರ, ಸಾ: ಬಡಗೇರಿ, ಅಂಕೋಲಾ
2. ನಾರಾಯಣ ಶಿವು ಹರಿಕಂತ್ರ, ಸಾ:ಬಡಗೇರಿ, ಅಂಕೋಲಾ
3. ತುಕ್ಕು ನಾರಾಯಣ ಹರಿಕಂತ್ರ, ಸಾ:ಬಡಗೇರಿ, ಅಂಕೋಲಾ
4. ಪಾಂಡುರಂಗ ದೇವಯ್ಯ ಮೇಸ್ತಾ, ಸಾ:ಕಾಸರಕೋಡ ಹಿರೇಮಠ,
5. ಪುರಸಯ್ಯಾ ದೇವಯ್ಯ ಮೇಸ್ತಾ, ಸಾ: ಕಾಸರಕೋಡ ಹಿರೇಮಠ,
6. ಬೊಬ್ಬೈಮಿನೀನ, ಸಾ: ಕಾಸರಕೋಡ ಹಿರೇಮಠ,
7. ಗಣಪತಿ ಹರಿಕಾಂತ, ಸಾ: ಚಿತ್ತಾಕುಲಾ.

**ಅರ್ಜಿದಾರ**

**ಗಣಪತಿ ಗುಣಾ ತಾಂಡೇಲ್ ಯಾನೆ ಹರಿಕಂತ್ರ, ಸಾ: ಸೀಬರ್ಡ್ ಕಾಲನಿ, ಚಿತ್ತಾಕುಲಾ**

**(ಶ್ರೀ ಎನ್.ವಿ. ನಾಯಕ, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)**

**ತೀರ್ಪು**

1. ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34 ರಂತೆ ಹೊರಿಸಿದ್ದು, ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 15.02.2001ರಂದು ರಾತ್ರಿ ಸುಮಾರು 21-30 ಗಂಟೆಯ ಸಮಯಕ್ಕೆ ಹೊನ್ನಾವರ ತಾಲ್ಲೂಕಿನ ಕಾಸರಕೋಡ ಸಮುದ್ರದ ದಂಡೆಯಲ್ಲಿ ನಿಲ್ಲಿಸಲಾದ “ಶ್ರೀ ಮಹಾಗಣಪತಿ ಅನುಗ್ರಹ” ಎಂಬ ಹೆಸರಿನ 4 ಸಿಲಿಂಡರಿನ ರಸ್ಟನ್ ಕಂಪನಿಯ ಫಿಶಿಂಗ್ ಬೋಟ್‌ನ್ನು ತಪಾಸಣೆ ಮಾಡಲಾಗಿ ಅದರಲ್ಲಿ ಪ್ರತಿಯೊಂದು ಪೊಟ್ಲೆಯಲ್ಲಿ 375 ಮಿ.ಲೀ.ನ 48 ರಂತೆ ಒಟ್ಟು 80 ಪೊಟ್ಲೆಗಳಲ್ಲಿ ಬ್ಲ್ಯೂ ಸ್ಟಾರ್ ಕೋಕೊನಟ್ ಫೆನ್ನಿ ಎಂಬ ಸರಾಯಿ ಬಾಟ್ಲಿಗಳು ಇರುವುದು ಮತ್ತು ಪ್ರತಿಯೊಂದು ಪೊಟ್ಲೆಯಲ್ಲಿ 180 ಮಿ.ಲೀ.ನ 96ರಂತೆ ಒಟ್ಟು 85 ಪೊಟ್ಲೆಗಳಲ್ಲಿ ಡಾ: ಬ್ರಾಂಡಿ ಎಂಬ ಲೇಬಲಿನ ಮದ್ಯದ ಸೀಸೆಗಳು ಇದ್ದದ್ದು ಪತ್ತೆಹಚ್ಚಿ, ಅವನ್ನು ಅನಧಿಕೃತವಾಗಿ ಏಳು ಜನ ಆರೋಪಿಗಳು ರಹದಾರಿ ಪತ್ರ ಹೊಂದದೇ ಸಾಗಿಸಿದ್ದು ಕಂಡು ಬಂದಿದ್ದರಿಂದ ಪಂಚರ ಸಮಕ್ಷಮ ಪಂಚನಾಮೆ ತಯಾರಿಸಿ ಸದ್ರಿ ಮದ್ಯಸಾರದ ಸ್ವತ್ತುಗಳು ಹಾಗೂ ಬೋಟನ್ನು ಮುಂದಿನ ಕ್ರಮದ ಕುರಿತು ಜಪ್ತು ಮಾಡಿ ಹೊನ್ನಾವರ ಪೊಲೀಸ್ ಠಾಣೆಗೆ ಫಿರ್ಯಾದು ನೀಡಿದ ಪ್ರಕಾರ, ಪ್ರಥಮ ಮಾಹಿತಿ ವರದಿ ನಂ. 39/2001 ರ ಪ್ರಕಾರ ದಿನಾಂಕ: 15.02.2001ರಂತೆ ಪ್ರಕರಣವನ್ನು ದಾಖಲಿಸಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತು ಪಡಿಸಿ) ಬೋಟಿನ ಸಹಿತ ಹಾಗೂ ಗುನ್ನೆಗೆ ಸಂಬಂಧಿಸಿದ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ ಕರ್ನಾಟಕ ಅಬಕಾರಿ ಕಾಯ್ದೆಯ ಕಲಂ 43ಎ(2)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿರುತ್ತಾರೆ.

3. ದಿನಾಂಕ: 24.02.2001 ರಂದು ಶ್ರೀ ಎನ್.ವಿ. ನಾಯಕ, ವಕೀಲರು ಕಾರವಾರ ಇವರು ತನ್ನ ಅರ್ಜಿಯನ್ನು ಸಲ್ಲಿಸುತ್ತಾ, ಪ್ರಕಣದಲ್ಲಿ ಜಪ್ತಿಯಾದ ದೋಣಿಯು ಗಣಪತಿ ಗುಣಾ ತಾಂಡೇಲ್ ಯಾನೆ ಹರಿಕಂತ್ರ, ಸಾ: ಸೀಬರ್ಡ್ ಕಾಲನಿ, ಚಿತ್ತಾಕುಲಾ ಇವರಿಗೆ ಸೇರಿದ್ದಾಗಿದ್ದು, ಸದರಿ ದೋಣಿಯನ್ನು ಮೀನುಗಾರಿಕೆಗಾಗಿ ಉಪಯೋಗಿಸಲಾಗುತ್ತಿತ್ತೆಂದೂ, ದೋಣಿಯ ಬಳಕೆಗಾಗಿ ಚಾಲಕ ಮತ್ತು ಇತರೇ ಮೀನುಗಾರರನ್ನು ಮೀನುಗಾರಿಕೆಗಾಗಿ ನಿಯೋಜಿಸಿ, ಅದನ್ನು ಬೈತಕೋಲದಲ್ಲಿ ಇಡಲು ಸೂಚಿಸಲಾಗಿತ್ತೆಂದೂ, ದೋಣಿಯ ಮಾಲಿಕರಿಗೆ ಗೊತ್ತಿಲ್ಲದೆ ಚಾಲಕ ಮತ್ತು ಇತರರು ಈ ಪ್ರಕರಣದಲ್ಲಿ ಜಪ್ತಿಯಾದ ದೋಣಿಯನ್ನು ಅನಧಿಕೃತವಾಗಿ ಬಳಸಿರಬೇಕೆಂದೂ, ಅನಂತರ ಸುದ್ದಿ ಮಾಧ್ಯಮದ ಮೂಲಕ ಅರ್ಜಿದಾರರಿಗೆ ದೋಣಿ ಜಪ್ತಿಯಾದ ವಿಷಯ ತಿಳಿಯಿತೆಂದು ತಿಳಿಸಿ, ಜಪ್ತಿಯಾದ ವಾಹನವನ್ನು ಅದರ ಮಾಲಿಕರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಕೋರಿರುತ್ತಾರೆ.

4. ಪ್ರಕರಣದಲ್ಲಿ ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ದಿನಾಂಕ: 04.06.2000ರಂದು ಈ ಪ್ರಕರಣದಲ್ಲಿನ ಆರೋಪಿ ಹಾಗೂ ಅರ್ಜಿದಾರರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1)(ಎ) ರನ್ವಯ ಕಾರಣಕೇಳಿ ನೋಟಿಸನ್ನು ಪ್ರಕರಣ ದಾಖಲಿಸಿದ ಅಧಿಕಾರಿಗಳ ಮೂಲಕ ಜಾರಿ ಮಾಡಿಸಲಾಗಿ, ಈ ನೋಟಿಸಿಗೆ ಯಾರೂ ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

5. ದಿನಾಂಕ: 28.02.2001ರಂದು ದೋಣಿಯ ಮಧ್ಯಂತರ ಬಿಡುಗಡೆಯ ಅರ್ಜಿಯನ್ನು ಈ ಪ್ರಾಧಿಕಾರದಿಂದ ತಿರಸ್ಕರಿಸಲಾಗಿ, ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ ಪ್ರಕಾರ ಮಾನ್ಯ ಸೆಶನ್ಸ್ ನ್ಯಾಯಾಲಯ, ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ:

54/2001, ದಿನಾಂಕ:02.03.2001ರಂತೆ ದೋಣಿಯ ಬೆಲೆಯ ನಷ್ಟಭರ್ತಿ ಪತ್ರವನ್ನು ಪಡೆದು ಅದನ್ನು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಆದೇಶಿಸಿದ ಪ್ರಕಾರ ದಿನಾಂಕ: 28.03.2001ರಂದು ಬಿಡುಗಡೆ ಮಾಡಲಾಗಿರುತ್ತದೆ.

6. ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ತನಿಖಾಧಿಕಾರಿಗಳು ಈ ಪ್ರಾಧಿಕಾರದಲ್ಲಿ ಹಾಜರುಪಡಿಸಿದ್ದು, ದಿನಾಂಕ: 11.06.2001ರಂದು ನ್ಯಾಯ ವಿಜ್ಞಾನ ಪ್ರಯೋಗಶಾಲೆಯ ವೈಜ್ಞಾನಿಕ ಅಧಿಕಾರಿಗಳು, ಬೆಂಗಳೂರು ಇವರು ನೀಡಿದ ವರದಿಯಲ್ಲಿ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳಲ್ಲಿ "ಆಲ್ಕೋಹಾಲ್ ಪತ್ತೆ ಆಗಿರುತ್ತದೆ." ಎಂದು ವರದಿಸಿರುತ್ತಾರೆ.

7. ಈ ಪ್ರಕರಣವನ್ನು ದಾಖಲಿಸಿ 30 (ಮೂವತ್ತು) ದಿನಗಳು ಕಳೆದ ತರುವಾಯವೂ ಜಪ್ತಿಯಾದ ಗೋವಾ ಸರಾಯಿ ಮತ್ತು ಮದ್ಯದ ಸ್ವತ್ತುಗಳು ತನ್ನದೆಂದು ಕೋರಿ ಯಾರೂ ತನ್ನ ಹಕ್ಕನ್ನು ಸ್ಥಾಪಿಸಿ ಅರ್ಜಿಯನ್ನು ಈ ಪ್ರಾಧಿಕಾರದಲ್ಲಿ ಸಲ್ಲಿಸದಿದ್ದ ಕಾರಣಕ್ಕಾಗಿ ಕ.ಅ. ಕಾಯ್ದೆ 1965 ಕಲಂ 43-ಎ(2) ರನ್ವಯ ದಿನಾಂಕ: 24.04.2002 ರಂದು ಸದರಿ ಮದ್ಯಸಾರದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ವಿಲೇವಾರಿಗೆ ಆದೇಶಿಸಲಾಗಿರುತ್ತದೆ.

8. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ-1 (ಸಿ) ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯೂ-1 ರಿಂದ 4 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ ನಿಶಾನೆ ಪಿ-1 ರಿಂದ ಪಿ-3 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಿಬ್ಬರೂ ಪಿ.ಡಬ್ಲ್ಯೂ-3 ಮತ್ತು ಪಿ.ಡಬ್ಲ್ಯೂ-4 ರಂತೆ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

9. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡು ಬಂದಿದ್ದರಿಂದ ದಂಡ ಪ್ರಕ್ರಿಯೆ ಸಂಹಿತೆ ಕಲಂ-313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ಪಡೆದುಕೊಳ್ಳಲಾಯಿತು. ಯಾವುದೇ ನಿಶಾನೆಗಳನ್ನು ಗುರ್ತಿಸಿಕೊಂಡಿರುವುದಿಲ್ಲ.

10. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎನ್.ವಿ. ನಾಯಕ, ವಕೀಲರು ಕಾರವಾರ ರವರು ಮಂಡಿಸಿದ ಲಿಖಿತ ವಾದ ವಿವಾದಗಳನ್ನು ಪರಾಂಬರಿಸಲಾಯಿತು. ಕಡತದಲ್ಲಿ ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬರುತ್ತದೆ.

11. **ವಿವಾದಾಂಶಗಳು:**

1. ದಿನಾಂಕ: 04.02.2001ರಂದು ರಾತ್ರಿ ಸುಮಾರು 21-30 ಗಂಟೆಯ ಸಮಯಕ್ಕೆ ಹೊನ್ನಾವರ ತಾಲ್ಲೂಕಿನ ಕಾಸರಕೋಡ ಸಮುದ್ರದ ದಂಡೆಯಲ್ಲಿ ನಿಲ್ಲಿಸಲಾದ "ಶ್ರೀ ಮಹಾಗಣಪತಿ ಅನುಗ್ರಹ" ಎಂಬ ಹೆಸರಿನ 3 ಸಿಲೆಂಡರಿನ ರಸ್ಟನ್ ಕಂಪನಿಯ ಫಿಶಿಂಗ್ ಬೋಟಿನಲ್ಲಿ ಅಕ್ರಮವಾಗಿ ಪ್ರತಿಯೊಂದು ಪೊಟ್ಲೆಯಲ್ಲಿ 375 ಮಿ.ಲೀ.ನ 48ರಂತೆ ಒಟ್ಟು 80 ಪೊಟ್ಲೆಗಳಲ್ಲಿ ಗೋವಾ ರಾಜ್ಯದ ಬ್ಲೂಸ್ಟಾರ್ ಕೊಕೊನಟ್ ಫೆನ್ನಿ ಬಾಟ್ಲಿಗಳು ಹಾಗೂ ಪ್ರತಿಯೊಂದು ಪೊಟ್ಲೆಯಲ್ಲಿ 180 ಮಿ.ಲೀ. ನ 96 ರಂತೆ ಒಟ್ಟು 85 ಪೊಟ್ಲೆಗಳಲ್ಲಿ ಡಾ. ಬ್ರಾಂಡಿ ಎಂಬ ಲೇಬಲಿನ ಮದ್ಯದ ಸೀಸೆಗಳನ್ನು ಅನಧಿಕೃತವಾಗಿ ಈ ಪ್ರಕರಣದ 7 ಜನ ಆರೋಪಿಗಳು ಸಾಗಿಸುತ್ತಿದ್ದರೇ? ಅಥವಾ ಇಲ್ಲವೇ

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲಿಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ದೋಣಿಯಲ್ಲಿ ಅಕ್ರಮವಾಗಿ ಗೋವಾ ಫೆನ್ನಿ ಮತ್ತು ಮದ್ಯವು ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ

3. ದೋಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ? ಅಥವಾ ಇಲ್ಲವೇ

ಅಂಶ-1 : ಸಕಾರಾತ್ಮಕವಾಗಿ
ಅಂಶ-2 : ನಕಾರಾತ್ಮಕವಾಗಿ
ಅಂಶ-3 : ಸಕಾರಾತ್ಮಕವಾಗಿ

**ಕಾರಣಗಳು**

12. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಸಾಕ್ಷಿದಾರರಾದ ಈ ಪ್ರಕರಣದ ಫಿರ್ಯಾದುದಾರರಾದ ವಿ.ಬಿ. ಗಾಂವಕರ, ಸಿ.ಪಿ.ಐ. ರವರು ದಿನಾಂಕ: 10.10.2001ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-1 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಸರಿಯಾಗಿಯೇ ಉತ್ತರಿಸುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಹೊನ್ನಾವರದ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯವು ತನ್ನ ಠಾಣೆಯಿಂದ 1 ಕಿ.ಮೀ. ದೂರದಲ್ಲಿದೆ ಎಂದು ಹಾಗೆಯೇ ನ್ಯಾಯಾಧೀಶರ ಮನೆಯು 1 ಕಿ.ಮೀ. ದೂರದಲ್ಲಿದೆ ಎಂದೂ, ತಾನು ಮ್ಯಾಜಿಸ್ಟ್ರೇಟರಿಂದ ಯಾವುದೇ ವಾರಂಟ್‌ನ್ನು ತೆಗೆದುಕೊಂಡಿಲ್ಲವೆಂದೂ, ತಮ್ಮ ಹತ್ತಿರ ವೃತ್ತ ಕಛೇರಿಯಲ್ಲಿ ವಾರದ ಡೈರಿ ಇರುತ್ತದೆಂದೂ, ವಾರದ ಡೈರಿಯಲ್ಲಿ ಈ ವಿಷಯವನ್ನು ಬರೆದಿರುತ್ತೇವೆಂದೂ, ಆ ಡೈರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರು ಮಾಡಲು ಯಾವುದೇ ತೊಂದರೆ ಇರಲಿಲ್ಲವೆಂದೂ, ಅದನ್ನು ಕೇಳದೇ ಇರುವುದರಿಂದ ಹಾಜರುಪಡಿಸಲಿಲ್ಲವೆಂದೂ, ಈ ಪ್ರಕರಣದಲ್ಲಿ ಚೀಲಗಳನ್ನು ಸಹ ಜಪ್ತು ಮಾಡಿರುತ್ತೇವೆಂದೂ, ಈ ಪ್ರಕರಣದಲ್ಲಿ

ತಾನು ಒಟ್ಟು 24 ಮಾದರಿ ಸೀಸೆಗಳಿಗೆ ಶೀಲು ಹಾಕಿದ್ದೇನೆಂದೂ, ಜೀವು ಎನ್ನುವವನು ಯಾವುದೇ ಹೇಳಿಕೆ ನೀಡಿಲ್ಲ ಎನ್ನುವುದು ಸರಿಯಲ್ಲವೆಂದೂ, ವಾರಸುದಾರರಿಲ್ಲದ ಮಾಲುಗಳು ಸಿಕ್ಕಾಗ ನಾವು ಅನ್‌ಕ್ಲೇಮ್ಡ್ ಕೇಸ್ ಅಂತ ದಾಖಲು ಮಾಡಿ, ನ್ಯಾಯಾಲಯಕ್ಕೆ ವರದಿ ಒಪ್ಪಿಸುತ್ತೇವೆಂದೂ, ಈ ಪಂಚರು ಸ್ಥಳೀಯರಲ್ಲ ಮತ್ತು ಇವರು ನಮ್ಮ ಖಾಯಂ ಪಂಚರು ಎನ್ನುವುದು ಸರಿಯಲ್ಲವೆಂದೂ, ಹತ್ತಿರದಲ್ಲಿ ಮೀನುಗಾರರ ಕುಟುಂಬ ವಾಸಿಸುತ್ತದೆ ಎನ್ನುವುದು ಸರಿಯಲ್ಲವೆಂದೂ, ಅಲ್ಲಿ ಮೀನುಗಾರರು ಮೀನು ಹಿಡಿಯುತ್ತಾ ಇರುತ್ತಾರೆನ್ನುವುದು ಸರಿಯಲ್ಲವೆಂದೂ, ಅರ್ಜಿದಾರರು ಎಂದಿಗೂ ಬೋಟನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿಲ್ಲ ಅನ್ನುವುದು ಸರಿಯಲ್ಲವೆಂದೂ, ಈ ಅರ್ಜಿದಾರರ ಬೋಟಿಗೂ ಮತ್ತು ಅರ್ಜಿದಾರರಿಗೂ ಜಪ್ತು ಪಡಿಸಿದ ಮಾಲಿಗೂ ಯಾವುದೇ ರೀತಿಯ ಸಂಬಂಧಿಸಿದ್ದಲ್ಲ ಎನ್ನುವುದು ಸರಿಯಲ್ಲವೆಂದೂ, ಅಂಕಿ-ಸಂಖ್ಯೆಗಳಿಗೋಸ್ಕರ ವಾರಸುದಾರರಿಲ್ಲದ ಮಾಲನ್ನು ಮುಂದೆ ಮಾಡಿಕೊಂಡು ಸುಳ್ಳು ಕೇಸು ಸೃಷ್ಟಿಸಿದ್ದೇವೆ ಎನ್ನುವುದು ಸರಿಯಲ್ಲವೆಂದೂ, ಹೆಗಡೆ ಕೊಟ್ಟಂತಹ ಮಾಹಿತಿಯನ್ನು ಫಿರ್ಯಾದಿಯಾಗಿ ತೆಗೆದುಕೊಳ್ಳಲು ತೊಂದರೆಯಿರಲಿಲ್ಲವೆಂದು ಹೇಳುವುದು ಸರಿಯಲ್ಲವೆಂದೂ, ತಾನು ಖುದ್ದಾಗಿ ನೋಡಿ ಪರಿಶೀಲಿಸಿ, ನಂತರ ಜಪ್ತು ಪಡಿಸಿ, ಮುಂದಿನ ಕ್ರಮ ತೆಗೆದುಕೊಂಡಿರುತ್ತೇನೆಂದೂ ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

13. ಈ ಪ್ರಕರಣದಲ್ಲಿ ಸಾಕಷ್ಟು ಸಮಯಾವಕಾಶವಿಲ್ಲದಿದ್ದ ಪ್ರಯುಕ್ತ ಆರೋಪಿಗಳು ಪರಾರಿಯಾಗಬಹುದೆಂಬ ಕಾರಣ ಮತ್ತು ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಕಾರಣಗಳಿಂದ ಕಲಂ 52ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಫಿರ್ಯಾದುದಾರರು ವಾರಂಟನ್ನು ತೆಗೆದುಕೊಂಡಿರಲಿಲ್ಲವೆಂದು ಕಂಡುಬರುತ್ತದೆ. ಕರ್ನಾಟಕ ಅಬಕಾರಿ (ಮದ್ಯ ಸಾಗಣೆ) ನಿಯಮಾವಳಿಗಳು 1965ರ ನಿಯಮ 4 ರನ್ವಯ ಹೊರ ರಾಜ್ಯದ ಮದ್ಯವನ್ನು ಕರ್ನಾಟಕ ರಾಜ್ಯದ ಮೂಲಕ ಸಾಗಿಸಬೇಕಾದಲ್ಲಿ ಒಬ್ಬ ವ್ಯಕ್ತಿಯು ತನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳಬಹುದಾದ ಮದ್ಯದ ಪ್ರಮಾಣ 0.700 ಮಿ.ಲೀ. ಆಗಿರುತ್ತದೆ. ಈ ಪ್ರಕರಣದಲ್ಲಿ 6.750 ಲೀಟರ್‌ನಷ್ಟು ಮದ್ಯವನ್ನು ಮಾದರಿಗೆ ತೆಗೆದಿರುವುದು ಕಂಡು ಬರುತ್ತದೆ. ವಾರಸುದಾರರಿಲ್ಲದ ಪ್ರಕರಣದಲ್ಲಿ ಮದ್ಯವನ್ನು ಇದೇ ಆರೋಪಿಗಳ ಮೇಲೆ ಆರೋಪ ಹೊರೆಸಿ, ಗುನ್ನೆಯನ್ನು ಏಕೆ ದಾಖಲಿಸಲಾಗಿದೆ ಎಂಬುದರ ಬಗ್ಗೆ ಎದುರುದಾರರ ಪಕ್ಷದವರು ಎಲ್ಲಿಯೂ ವಿವರಿಸಿಲ್ಲ. ಅಲ್ಲದೇ ಅರ್ಜಿದಾರರು ಈ ಘಟನೆ ಸಂಭವಿಸಿರುವುದನ್ನು ತನ್ನ ಅರ್ಜಿ ದಿನಾಂಕ: 24.02.2001 ರಲ್ಲಿ ಸ್ವತಃ ಒಪ್ಪಿಕೊಂಡಿರುತ್ತಾರೆ. ದಿನೇಶ ಹೆಗಡೆ ಇವರು ವರ್ತಮಾನವನ್ನು ನೀಡಿದ ವ್ಯಕ್ತಿಯಾಗಿದ್ದು, ಗುನ್ನೆಯ ಅನ್ವೇಷಣಾಧಿಕಾರಿಗಳು ಇದೇ ಫಿರ್ಯಾದುದಾರರಾಗಿರುವುದರಿಂದ ಇವರು ತನ್ನ ಫಿರ್ಯಾದನ್ನು ನೀಡಿರುವುದು ಸಮಂಜಸವಾಗಿದೆ.

14. ನಂತರ ದಿನಾಂಕ: 27.02.2002 ರಂದು ಈ ಪ್ರಕರಣದ ತನಿಖಾಧಿಕಾರಿಗಳಾದ ವಿನಯ ಎಸ್. ನಾಯಕ, ಪೊಲೀಸ್ ಇನ್ಸ್‌ಪೆಕ್ಟರ್ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-2 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಯಲ್ಲಿ ತಾನು ಹೊನ್ನಾವರ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ಸಿ.ಪಿ.ಐ. ಹೊನ್ನಾವರ ರವರು ಮಧ್ಯರಾತ್ರಿ 3-00 ಗಂಟೆಗೆ ಸರ್ಕಾರದ ಪರವಾಗಿ ಲೇಖಿ ಫಿರ್ಯಾದಿಯನ್ನು ಗುನ್ನಾ ನಂ. 39/2001 ಕಲಂ ಅಬಕಾರಿ ಕಾಯ್ದೆ 32, 34 ಅಡಿಯಲ್ಲಿ ದಾಖಲಿಸಿಕೊಂಡೆನೆಂದರೂ, ಪಂಚನಾಮೆಯಡಿಯಂತೆ 375 ಎಂ.ಎಲ್. ಬಾಬ್ತು ಕೊಕೊನಟ್ ಫೆನ್ನಿಯ 48 ಬಾಟ್ಲಿಗಳು, 180 ಎಂ.ಎಲ್. ಬಾಬ್ತು ಡಾ. ಬ್ರಾಂಡಿ ಬಾಟ್ಲಿಗಳು 96 ಮತ್ತು "ಶ್ರೀ ಮಹಾಗಣಪತಿ ಅನುಗ್ರಹ" ಎಂಬ ಬೋಟನ್ನು ಜಪ್ತು ಮಾಡಿದ್ದನ್ನು ನನ್ನ ಮುಂದೆ ಹಾಜರು ಪಡಿಸಿದ್ದನ್ನು ಅವುಗಳ ಕುರಿತು ಸ್ವತ್ತಿನ ಪಟ್ಟಿಯನ್ನು ತಯಾರಿಸಿಕೊಂಡೆನೆಂದೂ, ಅವರು ಸಲ್ಲಿಸಿದ ಮಾದರಿಗಳನ್ನು ಪಡೆದುಕೊಂಡ ಕುರಿತು ಸ್ವತ್ತಿನ ಪಟ್ಟಿಯಲ್ಲಿ ನಮೂದು ಮಾಡಿದೆನೆಂದೂ, ಸ್ವತ್ತಿನ ಪಟ್ಟಿಯಲ್ಲಿ ಮಾದರಿಗಳನ್ನು ಹೊರತುಪಡಿಸಿ, ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದೆವೆಂದೂ, ಪ್ರಥಮ ವರ್ತಮಾನವನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ಕಳಿಸಿದೆವೆಂದೂ ಮತ್ತು ಬೋಟನ್ನು ಸ್ಥಳದ ಸೌಕರ್ಯವಿಲ್ಲದ ಕಾರಣ ಕಡಲು ಪಡೆ ಪಿ.ಎಸ್.ಐ. ರವರಿಗೆ ಅದರ ರಕ್ಷಣೆಗೋಸ್ಕರ ವಹಿಸಿದೆನೆಂದೂ, ಮತ್ತು ಮಾದರಿ ಸೀಸೆಗಳನ್ನು ಡಿ.ಎಸ್.ಪಿ. ಭಟ್ಕಳರವರ ಮೂಲಕ ತಜ್ಞರ ಬಳಿ ಕಳುಹಿಸಿದೆನೆಂದು ನುಡಿದಿರುತ್ತಾರೆ. ನಂತರ ಎದುರುದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ನಿಶಾನೆ-2 ರ ಪ್ರಕಾರ ಶ್ರೀ ವಿ.ಬಿ. ಗಾಂವಕರ, ಸಿ.ಪಿ.ಐ. ರವರು ತನಗೆ ಫಿರ್ಯಾದನ್ನು ನೀಡಿಲ್ಲ ಎನ್ನುವುದು ಸರಿಯಲ್ಲವೆಂದೂ, ತಾನು ಯಾವುದೇ ರೀತಿಯ ಹೇಳಿಕೆಗಳನ್ನು ಪಡೆದುಕೊಂಡಿಲ್ಲ ಎನ್ನುವುದು ಸರಿಯಲ್ಲವೆಂದೂ, ಅಂಕೆ-ಸಂಖ್ಯೆಗೋಸ್ಕರ ಸುಳ್ಳು ಪ್ರಕರಣವನ್ನು ಸೃಷ್ಟಿಸಿ, ಸಾಕ್ಷಿ ನುಡಿದಿದ್ದೇನೆಂಬುದು ಸರಿಯಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

15. ನಿಶಾನೆ-2 ರಂತೆ ಫಿರ್ಯಾದನ್ನು ನೀಡಿಲ್ಲವೆಂಬ ಬಗ್ಗೆಯಾಗಲೀ ಅಥವಾ ಯಾವುದೇ ರೀತಿಯ ಹೇಳಿಕೆಗಳನ್ನು ಪಡೆದುಕೊಂಡಿಲ್ಲ ಎಂಬ ಬಗ್ಗೆಯಾಗಲೀ, ಎದುರುದಾರರ ಪಕ್ಷದವರು ದಾಖಲೆಗಳನ್ನು ಒದಗಿಸಿಲ್ಲ. ಅಂಕೆ-ಸಂಖ್ಯೆಗೋಸ್ಕರ ಇದೇ ಅರ್ಜಿದಾರರ ಮೇಲೆ ಗುನ್ನೆಯನ್ನು ಏಕೆ ದಾಖಲಿಸಲಾಗಿದೆ ಎಂಬ ಬಗ್ಗೆಯೂ ವಿವರಿಸಿಲ್ಲ.

16. ಈ ಪ್ರಕರಣದ ಪಂಚಸಾಕ್ಷಿ ನಂ.2 ನೇವರಾದ ಮಹಮ್ಮದ ಜಿಕ್ರಿಯಾ ಹಮಜಾ ಇವರು ದಿನಾಂಕ: 28.01.2004ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಮಾನ್ಯ ಎ.ಡಿ.ಪಿ. ಯವರ ಮುಖ್ಯ ವಿಚಾರಣೆಗೆ ಪಿ.ಡಬ್ಲ್ಯೂ-3 ರಂತೆ ಉತ್ತರಿಸುತ್ತಾ, ತಾನು ಮೀನು ತರಲು ಹೋದಾಗ ತನಗೆ ಪಂಚನಾಮೆಗೆ ಸಹಿ ಹಾಕಲು ಪೊಲೀಸರು ಹೇಳಿದರೆಂದೂ, ಪಂಚನಾಮೆಯ ಮೇಲಿನ ಸಹಿಯು ತನ್ನದೇ ಇರುತ್ತದೆಂದೂ, ಅದರಲ್ಲಿ ಬರೆದ ವಿಷಯವು ತನಗೆ ಗೊತ್ತಿರುವುದಿಲ್ಲವೆಂದೂ, ಬೋಟು ಮತ್ತು ಮದ್ಯ ಹಾಗೂ ಸರಾಯಿಯನ್ನು ತನ್ನ ಸಮಕ್ಷಮ ಜಪ್ತು ಮಾಡಿ ಪಂಚನಾಮೆ ತಯಾರಿಸಿದರು ಎನ್ನುವುದು ಸರಿಯಲ್ಲವೆಂದೂ, ತಾನು 50 ರೂ.ಗಳ ಆದಾಯ ಹೊಂದಿರುತ್ತೇನೆಂದೂ, ಅದರಿಂದ 6 ಜನರನ್ನು ಸಲಹುತ್ತೇನೆಂದೂ, ತನ್ನ ಆದಾಯದ ಮೇಲೆಯೇ ಎಲ್ಲರೂ ಜೀವನ ಸಾಗಿಸುತ್ತಾರೆಂದೂ, ತನಗೆ ಕನ್ನಡ ಓದಲು ಮತ್ತು ಬರೆಯಲು ಬರುತ್ತದೆಂದೂ, ಯಾವುದಾದರೂ ದಾಖಲೆಯನ್ನು ಸಹಿಗೆ ಕೊಟ್ಟರೆ ಅದನ್ನು ಓದಿ ನೋಡಿ ಸಹಿ

ಮಾಡುತ್ತೇನೆಂದೂ, ಇಂತಹ ದಾಖಲೆಗಳನ್ನು ಸುಳ್ಳು ಬರೆದಿದ್ದ ಪಕ್ಷದಲ್ಲಿ ತಾನು ಸಹಿ ಹಾಕುವುದಿಲ್ಲವೆಂದೂ, ಮತ್ತು ತಾನು ಅರ್ಜಿದಾರರಿಂದ ಹಣ ಪಡೆದು ಸುಳ್ಳು ಸಾಕ್ಷಿ ನುಡಿಯುತ್ತೇನೆನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ. ಅದೇ ದಿನ ಈ ಪ್ರಕರಣದ ಪಂಚ ಸಾಕ್ಷಿ ನಂ.2 ನೇವರಾದ ಪಂಡು ಅಯ್ಯಪ್ಪಾ ಅಂಬಿಗ ಇವರು ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ಪ್ರತಿಕೂಲ ಸಾಕ್ಷಿಯನ್ನು ನುಡಿದು ನಂತರ ಪಾಟಿ ಸವಾಲಿನಲ್ಲಿ ತಾನು ಕೂಲಿ ಮಾಡಿ ಜೀವಿಸುತ್ತಿದ್ದು, ಮನೆಯಲ್ಲಿ 6 ಜನರಿದ್ದು ಅವರ ಜೀವನವು ತನ್ನ ಆದಾಯದಿಂದಲೇ ನಡೆಯುತ್ತದೆಂದೂ, ತಾನು 9ನೇ ಇಯತ್ತೆಯವರೆಗೆ ಓದಿರುತ್ತೇನೆಂದೂ, ತನಗೆ ಕನ್ನಡ ಓದಲು ಮತ್ತು ಬರೆಯಲು ಬರುತ್ತದೆ ಎಂದೂ, ಯಾವುದಾದರೂ ದಾಖಲೆಯನ್ನು ಸಹಿಗೆ ಕೊಟ್ಟರೆ ಅದನ್ನು ಓದಿ ನೋಡಿ ಸಹಿ ಮಾಡುತ್ತೇನೆಂದೂ, ಇಂತಹ ದಾಖಲೆಗಳನ್ನು ಸುಳ್ಳು ಬರೆದಿದ್ದ ಪಕ್ಷದಲ್ಲಿ ತಾನು ಸಹಿ ಹಾಕುವುದಿಲ್ಲವೆಂದೂ, ಮತ್ತು ತಾನು ಅರ್ಜಿದಾರರಿಂದ ಹಣ ಪಡೆದು ಸುಳ್ಳು ಸಾಕ್ಷಿ ನುಡಿಯುತ್ತೇನೆನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ತನಗೆ ಪೊಲೀಸಿನವರ ಭಯವಿದೆ ಎಂದೂ, ತಾನು ಪಂಚನಾಮೆಯ ಮೇಲೆ ಸಹಿ ಮಾಡಿರುವುದಿಲ್ಲವೆಂದು ಹೇಳಿದರೆ ತನ್ನ ಮೇಲೆ ಒಂದು ಕೇಸು ಹಾಕುತ್ತಾರೆಂದೂ, ತಾನು ಬಡವನಾದುದರಿಂದ ಅವರೊಂದಿಗೆ ಹೋರಾಡಲು ಸಾಧ್ಯವಾಗುವುದಿಲ್ಲವೆಂದೂ, ಪೊಲೀಸರ ಒತ್ತಾಯದ ಮೇರೆಗೆ ತಾನು ಸಹಿ ಮಾಡಿದ್ದೇನೆಂದೂ, ಅದರಲ್ಲಿ ಏನು ಬರೆದಿದ್ದಾರೆನ್ನುವುದು ತನಗೆ ಗೊತ್ತಿಲ್ಲವೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

16. ಪಿ.ಡಬ್ಲ್ಯೂ-3 ಮತ್ತು 4ನೇ ಯವರು ತಮಗೆ ಕನ್ನಡ ಓದಲು ಮತ್ತು ಬರೆಯಲು ಬರುತ್ತದೆಂದೂ, ಯಾವುದಾದರೂ ದಾಖಲೆಯನ್ನು ಸಹಿಗೆ ಕೊಟ್ಟರೆ ಅದನ್ನು ಓದಿ ನೋಡಿ ಸಹಿ ಮಾಡುತ್ತೇವೆಂದೂ, ಇಂತಹ ದಾಖಲೆಗಳಲ್ಲಿ ಸುಳ್ಳು ಬರೆದಿದ್ದ ಪಕ್ಷದಲ್ಲಿ ತಾವು ಸಹಿ ಹಾಕುವುದಿಲ್ಲವೆಂದೂ, ತಿಳಿಸಿರುವುದರಿಂದ ಈ ಪ್ರಕರಣದ ಪಂಚನಾಮೆಗೂ ಸಹ ಓದಿ ನೋಡಿಯೇ ಸಹಿ ಹಾಕಿರುವರೆಂದು ಖಚಿತವಾಗುತ್ತದೆ. ಅಲ್ಲದೇ ಇವರುಗಳು ತನ್ನ ಪ್ರತಿ ದಿನದ ಆದಾಯ ರೂ. 50 ರಿಂದ 100 ಗಳ ವರೆಗೆ ಪಡೆದು ಕುಟುಂಬದ ಆರು ಜನರುಗಳನ್ನು ಸಾಕುವುದು ದುಸ್ತರವಾಗಿರುವುದರಿಂದ ಅರ್ಜಿದಾರರಿಂದ ಹಣ ಪಡೆದು ಸುಳ್ಳು ಸಾಕ್ಷಿ ನುಡಿದಿರುವುದನ್ನು ತಳ್ಳಿ ಹಾಕುವಂತಿಲ್ಲ. ಆದುದರಿಂದ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ಬೋಟಿನಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ಫೆನ್ನಿ ಮತ್ತು ಮದ್ಯವನ್ನು ಸಾಗಿಸಿರುವುದನ್ನು ಅಭಿಯೋಜನೆ ಪಕ್ಷದವರು ಪ್ರಬಲವಾಗಿ ಸಮರ್ಥಿಸಿರುವುದು ಹಾಗೂ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬಂದಿರುವುದರಿಂದ ಒಂದನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

ದಿನಾಂಕ: 25.02.2004ರಂದು ಅರ್ಜಿದಾರರಾದಂತಹ ಗಣಪತಿ ಗುಣಾ ತಾಂಡೇಲ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತಮ್ಮ ಸಾಕ್ಷ್ಯವನ್ನು ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ನುಡಿಯುತ್ತಾ, ತನ್ನ ಮಾಲೀಕತ್ವದ ಬೋಟಿನಲ್ಲಿ ಅಕ್ರಮ ಸಾರಾಯಿಯನ್ನು ಯಾವತ್ತೂ ಸಾಗಾಟ ಮಾಡಿರುವುದಿಲ್ಲವೆಂದೂ, ಹೊನ್ನಾವರ ಪೊಲೀಸ್‌ರು ಹಾಕಿದ ಕೇಸು ಸುಳ್ಳಾಗಿರುತ್ತದೆಂದೂ, ಈ ಕೇಸಿನ ಬಗ್ಗೆ ಮಾನ್ಯ ಜೆ.ಎಂ.ಎಫ್.ಸಿ. ಹೊನ್ನಾವರದಲ್ಲಿ ಆರೋಪಿಗಳು ನಿರ್ದೋಷಿಯೆಂದು ತೀರ್ಪಾಗಿರುತ್ತದೆಂದು ನುಡಿದಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ.ಯವರ ಪಾಟಿ ಸವಾಲಿನಲ್ಲಿ ಪೊಲೀಸರಿಗೂ ತನಗೂ ಯಾವುದೇ ರೀತಿಯ ವೈರತ್ವ ಇರುವುದಿಲ್ಲವೆಂದೂ, ತನ್ನ ಬೋಟಿನ ಜೊತೆ ಇನ್ನೂ ಸುಮಾರು 25 ರಿಂದ 30 ಬೋಟುಗಳನ್ನು ನಿಲ್ಲಿಸಿರುತ್ತಾರೆಂದೂ, ದಿನಾಂಕ: 14.02.2001ರಂದು ತನ್ನ ಬೋಟನ್ನು ಮೀನುಗಾರಿಕೆಗೆ ತೆಗೆದುಕೊಂಡು ಹೋಗಿ ಮರಳಿ ಬಂದಿರುತ್ತೇನೆಂದೂ, ದಿನಾಂಕ: 14.02.2001ರಂದು ತನ್ನ ಬೋಟನ್ನು ಪೊಲೀಸ್‌ರು ಜಪ್ತು ಮಾಡಿರುವುದು ನಿಜವಿರುತ್ತದೆಂದೂ, ಅನಂತರ ಅದನ್ನು ಈ ಪ್ರಾಧಿಕಾರದಿಂದ ಬಿಡಿಸಿಕೊಂಡಿರುತ್ತೇನೆಂದು ನುಡಿದಿರುತ್ತಾರೆ.

**ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:**

17. ಅರ್ಜಿದಾರರು ಪ್ರಕರಣ ದಾಖಲಾದಾಗ ಈ ಪ್ರಾಧಿಕಾರದಲ್ಲಿ ದಿನಾಂಕ: 24.02.2001ರಂದು ಸಲ್ಲಿಸಿದ ಅರ್ಜಿಯಲ್ಲಿ ಬೋಟನ್ನು ಬೈತಕೋಲ್ ದಲ್ಲಿ ಇಟ್ಟ ಸಮಯದಲ್ಲಿ ಅದರ ಚಾಲಕ ಮತ್ತು ಇತರರು ಈ ಪ್ರಕರಣದಲ್ಲಿ ಅನಧಿಕೃತ ಮದ್ಯಸಾಗಾಣಿಕೆಗೆ ಬಳಸಿರಬೇಕೆಂದು ಒಪ್ಪಿಕೊಂಡಿದ್ದು, ಈಗ ನೀಡಿದ ಹೇಳಿಕೆಯಲ್ಲಿ ಪೊಲೀಸ್‌ರು ಸುಳ್ಳು ಕೇಸು ಹಾಕಿದ್ದಾರೆಂದು ನುಡಿದಿರುವುದರಿಂದ ಸದರಿಯವರ ಹೇಳಿಕೆಗಳು ಒಂದಕ್ಕೊಂದು ತಾಳೆಯಾಗದಿರುವುದು ಕಂಡು ಬರುತ್ತದೆ. ಕಲಂ 43 ಎ(2) ರಂತೆ ಕ್ರಿಮಿನಲ್ ಪ್ರಕರಣವೇ ಬೇರೆ, ಮತ್ತು ಮುಟ್ಟುಗೋಲು ನಡಾವಳಿಯೇ ಬೇರೆಯಾಗಿರುವುದರಿಂದ ಕ್ರಿಮಿನಲ್ ಪ್ರಕರಣದಲ್ಲಿನ ತೀರ್ಪನ್ನು ಈ ನಡಾವಳಿಯಲ್ಲಿ ಪರಿಗಣಿಸಲು ಬರಲಾರದು. ಅಲ್ಲದೇ ಬೋಟು ಜಪ್ತಿಯಾಗಿರುವುದನ್ನು ಸ್ವತಃ ಅರ್ಜಿದಾರರೆ ತನ್ನ ಹೇಳಿಕೆಯಲ್ಲಿ ಒಪ್ಪಿಕೊಂಡಿರುತ್ತಾರೆ. ಈ ಪ್ರಕರಣದಲ್ಲಿ ಅರ್ಜಿದಾರರು ತಾನು ಸ್ವತಃ ಶಾಮೀಲಾಗಿರದಿದ್ದರೂ, ಅವರು ನೇಮಿಸಿದಂತಹ ಚಾಲಕ ಮತ್ತು ಇತರೇ ಜನರು ಶಾಮೀಲಾಗಿರುವುದು ಫಿರ್ಯಾದುದಾರರ ಹೇಳಿಕೆ ಹಾಗೂ ದಾಖಲೆಗಳು ಮತ್ತು ಅರ್ಜಿದಾರರ ಪರ ಹೇಳಿಕೆಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಒಂದು ವೇಳೆ ಅರ್ಜಿದಾರರು ನೇಮಿಸಿದಂತಹ ಚಾಲಕ ಅಥವಾ ಇತರರು ಬೋಟನ್ನು ಅನಧಿಕೃತವಾಗಿ ಬಳಸದಿದ್ದಲ್ಲಿ ಆ ಜನರ ಹೇಳಿಕೆಯನ್ನು ಎದುರುದಾರರ ಪಕ್ಷದವರು ನುಡಿಸಬಹುದಾಗಿತ್ತಾದರೂ, ಅಂತಹ ಹೇಳಿಕೆಗಳನ್ನು ನುಡಿಸಿರುವುದಿಲ್ಲ. ಆದುದರಿಂದ ಈ ಘಟನೆ ಸಂಭವಿಸಿದ ದಿನ ಬೋಟು ಯಾರ ವಶದಲ್ಲಿತ್ತೋ ಅವರು ಶಾಮೀಲಾಗಿಯೇ ಮತ್ತು ಅವರಿಗೆ ಅರಿವಿದ್ದುಕೊಂಡೇ ಅದರಲ್ಲಿ ಗೋವಾ ಫೆನ್ನಿ ಮತ್ತು ಮದ್ಯದ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಮನವರಿಕೆಯಾಗುತ್ತದೆ.

18. ವಾದವಿವಾದದ ಸಮಯದಲ್ಲಿ ಎದುರುದಾರರ ಪರ ವಕೀಲರು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ಕೆ.ಎಲ್. ಸುಬ್ಬಯ್ಯ ವಿರುದ್ಧ ಕರ್ನಾಟಕ ಸರ್ಕಾರ (ಕೆ.ಎಲ್.ಜೆ. -1979 ಪುಟ ಸಂಖ್ಯೆ: 410) ನೇದನ್ನು ಹಾಜರು ಪಡಿಸಿರುತ್ತಾರೆ. ಈ ತೀರ್ಪಿನಲ್ಲಿ ಕಲಂ 54 ನೇದನ್ನು ಪಾಲಿಸದಿದ್ದ ಕಾರಣ ಕಾರ್ಯವ್ಯಾಪ್ತಿ ಇಲ್ಲದೇ ಅನ್ವೇಷಣೆಯನ್ನು ಮಾಡಿರುವುದು ಕಂಡು ಬರುವುದರಿಂದ ಆರೋಪಿಯನ್ನು ಬಿಡುಗಡೆಗೊಳಿಸಲಾಗಿರುತ್ತದೆ. ಆದರೆ ಇದು ಕ್ರಿಮಿನಲ್ ಪ್ರಕರಣಕ್ಕೆ ಸಂಬಂಧಿಸಿದ ತೀರ್ಪಾಗಿದ್ದು, ಅದನ್ನು ಮುಟ್ಟುಗೋಲು ಪ್ರಕರಣದಲ್ಲಿ ಪರಿಗಣಿಸಲು ಬರಲಾರದು. ಏಕೆಂದರೆ ಮಾನ್ಯ ಎಡಿಪಿ ಯವರು ಸಲ್ಲಿಸಿರುವ ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ

(ಐಎಲ್‌ಆರ್ 2002, ಕೆ.ಎ.ಆರ್. 1375) ನೇದನ್ನು ಹಾಜರುಪಡಿಸಿದ್ದು, ಅದರಲ್ಲಿ ಆರೋಪಿ ತಾನು ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿದ್ದರೂ ಸಹ ಆ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ನಿಯಮಗಳಡಿಯಲ್ಲಿ ಸೂಚಿಸಿದಂತೆ ಸರ್ಕಾರಕ್ಕೆ ಮುಟ್ಟುಗೋಲು ಪ್ರಕ್ರಿಯೆಯ ಅಧಿಕಾರ ವ್ಯಾಪ್ತಿ ಕುಂಠಿತಗೊಳ್ಳುವುದಿಲ್ಲ ಎಂದು ತೀರ್ಪಾಗಿರುತ್ತದೆ.

19. ಸರ್ಕಾರದ ಪರವಾಗಿ ಸಲ್ಲಿಸಿರುವ ಮಾನ್ಯ ಉಚ್ಛ ನ್ಯಾಯಾಲಯದ ಇನ್ನೊಂದು ತೀರ್ಪು ಅಬಕಾರಿ ನಿರೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಇತರರ ವಿರುದ್ಧ ಡಿ. ವೆಂಕಟರಮಣ ಸ್ವಾಮಿ (ಕೆ.ಸಿ. ಆ್ಯಂಡ್ ಸಿ.ಆರ್. 2003 (1) ಪುಟ ಸಂಖ್ಯೆ: 189) ರಲ್ಲಿ ವಾಹನದ ಪ್ರಭಾರವನ್ನು ಹೊಂದಿದಂತಹವನು ಕಾನೂನನ್ನು ಉಲ್ಲಂಘಿಸಿ, ಕರ ತಪ್ಪಿಸಿದ ಸ್ವತ್ತುಗಳ ಸಾಗಾಟದಲ್ಲಿ ತೊಡಗಿದಾಗ, ಆ ವಾಹನದ ಮಾಲೀಕನು ಪರಾನುಭವದ ಹೊಣೆಗಾರನಾಗಬೇಕಿದ್ದು, ಈ ರೀತಿಯ ತಪ್ಪಿಗಾಗಿ ಆತನು ಮುಟ್ಟುಗೋಲಿನಂತಹ ಪರಿಣಾಮವನ್ನು ಎದುರಿಸಬೇಕಾಗುತ್ತದೆಂದು ತೀರ್ಪಾಗಿರುತ್ತದೆ.

20. **ಮೂರನೆಯ ವಿವಾದಾಂಶ:** ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಮತ್ತು ಮಾನ್ಯ ಉಚ್ಛ ನ್ಯಾಯಾಲಯದ ಮೇಲ್ಕಾಣಿಸಿದ ಎರಡು ತೀರ್ಪುಗಳನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ಬೋಟಿನಲ್ಲಿ ಗೋವಾ ಮದ್ಯ ಮತ್ತು ಫೆನ್ನಿಯನ್ನು ಬೋಟಿನ ಚಾಲಕ ಮತ್ತು ಅದರ ಪ್ರಭಾರವನ್ನು ಹೊಂದಿದಂತಹ ಇತರರು ಶಾಮೀಲಾಗಿ ಸಾಗಿಸಿರುವುದು ಸಾಬೀತಾಗಿರುವುದರಿಂದ ಸದರಿ ಬೋಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ.

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ (1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊನ್ನಾವರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 39/2001 ದಿನಾಂಕ: 15.02.2001ರಲ್ಲಿ ಜಪ್ತಾದ "ಶ್ರೀ ಮಹಾಗಣಪತಿ ಅನುಗ್ರಹ" ಎಂಬ ಹೆಸರಿನ ನಾಲ್ಕು ಸಿಲಿಂಡರಿನ ರಸ್ಟನ್ ಕಂಪನಿಯ ಫಿಶಿಂಗ್ ಬೋಟನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸವಿಯ ಜೂನ್ ತಿಂಗಳ 30ನೇ ತಾರೀಖಿನಂದು ವಿಷಯನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿಗೆ ಬರುವುದು.

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

| | |
|---|---|
| ಪ್ರಾ.ಸಾ. ನಂ. 1 | : ವಿ.ಬಿ. ಗಾಂವಕರ, ಸಿ.ಪಿ.ಐ. |
| ಪ್ರಾ.ಸಾ. ನಂ. 2 | : ವಿನಯ ಎಸ್. ನಾಯಕ, ಪಿ.ಐ. |
| ಪ್ರಾ.ಸಾ. ನಂ. 3 | : ಮಹಮ್ಮದ ಜಿಕ್ರಿಯಾ ಹಮಜಾ |
| ಪ್ರಾ.ಸಾ. ನಂ. 4 | : ಪಾಂಡು ಅಯ್ಯಪ್ಪಾ ಅಂಬಿಗಾ |

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

| | |
|---|---|
| ಡಿ.ಡಬ್ಲ್ಯೂ ನಂ.1 | : ಗಣಪತಿ ಗುಣಾ ತಾಂಡೇಲ ಯಾನೆ ಹರಿಕಂತ್ರ |

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

| | |
|---|---|
| ನಿಶಾನೆ ಪಿ 1 | : ಪಂಚನಾಮೆ |
| ನಿಶಾನೆ ಪಿ 1ಎ | : ಫಿರ್ಯಾದಿಯ ಸಹಿ |
| ನಿಶಾನೆ ಪಿ 1ಬಿ | : ಪಂಚ ಸಾಕ್ಷಿ ನಂ. 1ನೇ ಯವರ ಸಹಿ |
| ನಿಶಾನೆ ಪಿ 1ಸಿ | : ಪಂಚ ಸಾಕ್ಷಿ ನಂ. 2ನೇ ಯವರ ಸಹಿ |
| ನಿಶಾನೆ ಪಿ 2 | : ಪ್ರ.ಮಾ. ವರದಿ |
| ನಿಶಾನೆ ಪಿ 2ಎ | : ಗುನ್ನೆ ದಾಖಲಿಸಿಕೊಂಡವರ ಸಹಿ |
| ನಿಶಾನೆ ಪಿ 3 | : ಸ್ವತ್ತಿನ ಪಟ್ಟಿ |
| ನಿಶಾನೆ ಪಿ 3ಎ | : ಸ್ವತ್ತಿನ ಪಟ್ಟಿಯ ಮೇಲಿನ ಸಹಿ |

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಕೆ.ಸಿ. ಹರಿದಾಸ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್.997

**IN THE COURT OF ADDITIONAL REGISTRAR OF CO-OPERATIVE SOCIETIES (I & M) OFFICE OF REGISTRAR OF CO-OPERATIVE SOCIETIES, ALI ASKER ROAD, BANGALORE-01**

**Dispute No. A (I & M) D2/1366/2002-2003**

| **Plaintiff:** | **V/s** | **Respondents:** |
|---|---|---|
| General Manager<br>Sir M. Visvesvaraya Co-operative Bank Ltd.,<br># 109, Corporate Office, Shankarmatt Road,<br>Bangalore-560 004. | | 1. Smt. P. Sridevi,<br># 79-D Nandidurga Road, Bangalore-560 046.<br>2. Sri N. Adinarayana,<br># 4/3 (4-1), Abhijith Apartments 1 Cross,<br>1 Main Road, Nagashetty halli,<br>Bangalore-560 094.<br>3. Sri P. Ramakrishna,<br># 79-D Nandidurga Road, Bangalore-560 046.<br>4. Sri N. Ramanujamma,<br># 4/3 (4-1), Abhijith Apartments 1 Cross,<br>1 Main Road, Nagashetty halli,<br>Bangalore-560 094.<br>5. Sri N. Yoganand<br># 4/3 (4-1), Abhijith Apartments 1 Cross,<br>1 Main Road, Nagashetty halli,<br>Bangalore-560 094. |

**ORDER OF ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACTS, 1959**

1. Whereas, the Petitioner Bank has filed the above dispute before me under Section 70 of the Karnataka Co-op. Societies Act, 1959 for recovery of a sum of Rs. 8,20,593/- along with future interest at 21% from the Respondents. The dispute is taken on file under Dispute No. A (I/M) DIS/D2/1366/2002-2003.

2. Whereas it is brought to my notice by the Petitioner Bank by an application filed under Section 103 of the Karnataka Co-operative Societies Act, 1959 that the Respondents are contemplating to convey or alienate or dispose the immovable properties belonging to the Respondents mentioned in the Schedule hereunder, with the intent to delay the enforcement or execution of any award or order that may be passed in the above dispute against them.

3. Whereas the Petitioner Bank has further stated that if the Respondents are not prevented from doing so, the Petitioner Bank will be left with no means to recover the amount even if any award/ decree is obtained against the respondents.

4. Whereas, I am fully convinced that the disposal of Schedule property of the Respondent would defeat or delay the enforcement or execution of any order/ decree that may be passed against the Respondents. I had ordered for issue of conditional attachment notice on 7th October 2002 directing the respondents to deposit a sum of Rs.8,50,000 and to produce the receipt/ challan issued thereon to this office on or before 11.12.2002 with out fail, further informing them if they fail to furnish the said amount the Conditional attachment will made absolute.

As it is observed that on 05.04.2003 the 1st Respondent has submitted by filing an application that he has made a payment of Rs. 3,50,000/- and requested to grant a period of 30 days. After granting a sufficient opportunity, till this day the respondents have not made any payments, therefore it is felt necessary to confirm the attachment in the circumstance mentioned above, I pass the following order.

**ORDER**

Conditional attachment notice issued on 07.10.2002 is here by confirmed and the Schedule mentioned below, is attached.

SCHEDULE OF PROPERTY BELONGING TO RESPONDENT 1, 2, & 3.

**SCHEDULE-1**

All the piece and parcel of Immovable property bearing Flat No.3, Ist Floor, Corp No.4/3 (4-1) Constructed on site bearing No.14, Kaneshmari No. 424, Khatha No.20, new NEC Hebbal Khatha No.313/14, with 18.5% undivided title and interest, in land measuring 36'60 (total 2160 Sft) with superbuilt up area of 920 sft. Situated at Nagashettyhalli Village, Kasaba Hobli, Bangalore North Taluk and bounded on

| | |
|---|---|
| East By | : Site No.15 |
| West By | : Site No. 13 |
| North By | : Road, |
| South By | : HAL Layout. |

**SCHEDULE-2**

All that part and parcel of the property bearing Sy. No. 508/104, and 509/104, to the extent of 4 acres each (total 8 Acres) situated at Devadana Village, Khandya Hobli, Chickmagalur Taluk, Chickmagalur district.

Given under my hand and seal this the 17th day of May 2004.

PR-998 Addl. Registrar of Co-op. Societies, (I & M).

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ, ಕುಮಟಾ, ಉತ್ತರ ಕನ್ನಡ ಜಿಲ್ಲೆ**

**ಅಧಿಸೂಚನೆ**

**ಸಂಖ್ಯೆ: ತಾಸಕಅ:ಸಿಬ್ಬಂದಿ:ಎಸ್3: ಸಿಆರ್-37:2003-04, ದಿನಾಂಕ: 26ನೇ ಸೆಪ್ಟೆಂಬರ್, 2003**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002 ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56: ಯೋಮಸ 02(1) ದಿನಾಂಕ: 18.07.2002.
2. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಪತ್ರ ಸಂಖ್ಯೆ: ಅಸಪ ಸಂಖ್ಯೆ: ಸಕನಿ: ವಿಘಯೋ: ಕುಂಕೋಕಅ: ಸಿಆರ್ 4: 2002-03 ದಿನಾಂಕ: 21.08.2003.
3. ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಅಧಿಸೂಚನೆ ಘೋಷಿಸಬೇಕಾಗಿರುವ ಮಾದರಿ.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

**ಸಕ್ಷಮ ಪ್ರಾಧಿಕಾರ ಅಪೀಲು ಪ್ರಾಧಿಕಾರ**

| | | |
|---|---|---|
| ತಾಲ್ಲೂಕು ಮಟ್ಟದಲ್ಲಿ | ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿ ಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1. ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯ ತಾಲ್ಲೂಕು ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1. | ಕಛೇರಿ ಅಧೀಕ್ಷಕರು | - 1 ಹುದ್ದೆ ಖಾಲಿ ಇದೆ |
| 2. | ಪ್ರಥಮ ದರ್ಜೆ ಸಹಾಯಕರು | - 1 ಹುದ್ದೆ ಖಾಲಿ ಇದೆ |
| 3. | ದ್ವಿತೀಯ ದರ್ಜೆ ಸಹಾಯಕರು | - 1 ಹುದ್ದೆ ಖಾಲಿ ಇದೆ |
| 4. | ಬೆರಳಚ್ಚುಗಾರರು | - 1 ಹುದ್ದೆ ಖಾಲಿ ಇದೆ |
| 5. | ಗ್ರೂಪ್- ಡಿ ನೌಕರರು | - 1 ಹುದ್ದೆ ಖಾಲಿ ಇದೆ |

ಇಲಾಖಾ ಅಧೀನದಡಿಯಲ್ಲಿರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳು.

| ಅ. ನಂ. | ಸಂಸ್ಥೆಯ ಹೆಸರು | ಸಂಖ್ಯೆ | | | ಹುದ್ದೆ |
|---|---|---|---|---|---|
| 1) | ಮೆಟ್ರಿಕ್ ಪೂರ್ವ ಗಂಡು ಮಕ್ಕಳ ವಸತಿ ನಿಲಯ | 4 | 1. | ಮೇಲ್ವಿಚಾರಕರು | 1 ಹುದ್ದೆ |
| | | | 2. | ಅಡಿಗೆಯವರು | 2 ಹುದ್ದೆಗಳು |
| | | | 3. | ಅಡಿಗೆ ಸಹಾಯಕರು | 1 ಹುದ್ದೆ |
| 2) | ಮೆಟ್ರಿಕ್ ಪೂರ್ವ ಹೆಣ್ಣು ಮಕ್ಕಳ ವಸತಿ ನಿಲಯ | 3 | 1. | ಮೇಲ್ವಿಚಾರಕರು | 1 ಹುದ್ದೆ |
| | | | 2. | ಅಡಿಗೆಯವರು | 2 ಹುದ್ದೆ (ಮಂಜೂರಿ ಹುದ್ದೆ 1 ಆಗಬೇಕಾಗಿದೆ) |
| | | | 3. | ಅಡಿಗೆ ಸಹಾಯಕರು | 1 ಹುದ್ದೆ |
| | | | 4. | ಕಾವಲುಗಾರರು | 1 ಹುದ್ದೆ |
| 3) | ಮ.ಕ. ಕೇಂದ್ರಗಳು | 2 | 1. | ಸಂಚಾಲಿಕೆ | 1 ಹುದ್ದೆ |
| | | | 2. | ಪರಿಚಾರಿಕಿ | 1 ಹುದ್ದೆ |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತದೆ.

1. ವಿದ್ಯಾರ್ಥಿಯರಿಗೆ ಶಿಷ್ಯ ವೇತನ
2. ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರಿಯ ನೆರವು
3. ಎಸ್ಎಸ್ಎಲ್‌ಸಿ ಪುರಸ್ಕಾರ ಹಣ

**1. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ.**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ತಾಲ್ಲೂಕು ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ವಲಯದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**2. ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:**

ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು ಜಾಬ್ ಚಾರ್ಟ್ ಪ್ರತಿ ಲಗತ್ತಿಸಿದೆ.

**3. ಕಛೇರಿ ಸಿಬ್ಬಂದಿಯವರು ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವುದು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿದ ನಂತರ ಸದರಿ ಪತ್ರಗಳನ್ನು ನೊಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು. ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**4. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಆಗಿಂದಾಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಲು ತಪಾಸಣೆ ಕಾರ್ಯ.
3. ಸರ್ಕಾರವು ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
4. ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
3. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್.1000 ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು, ಕುಮಟಾ.

**DIRECTORATE OF ECONOMICS AND STATISTICS, GOVERNMENT OF KARNATAKA, BANGALORE-1.**

**Consumer Price Index Numbers for Industrial Workers**

No. DES 24 PWX 2004 Month: APRIL 2004

State: Karnataka Base: 1987-88=100 Date : 02-07-2004

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD:**<br>(a) Cereals & Products | 304 | 427 | 374 | 348 | 344 | 328 | 355 | 303 | 268 | 379 | 332 | 357 |
| | (b) Pulses & Products | 270 | 303 | 297 | 324 | 278 | 277 | 300 | 300 | 270 | 293 | 293 | 301 |
| | (c) Oil & Fats | 261 | 262 | 255 | 266 | 284 | 259 | 286 | 302 | 271 | 276 | 268 | 261 |
| | (d) Meat, Fish & Eggs | 339 | 308 | 364 | 453 | 325 | 341 | 308 | 344 | 528 | 357 | 385 | 321 |
| | (e) Milk & Products | 342 | 226 | 315 | 313 | 299 | 267 | 252 | 341 | 289 | 257 | 307 | 281 |
| | (f) Condiments & Spices | 213 | 304 | 347 | 401 | 301 | 277 | 270 | 229 | 231 | 275 | 275 | 320 |
| | (g) Vegetables & Fruits | 215 | 291 | 291 | 357 | 277 | 279 | 267 | 225 | 229 | 242 | 191 | 473 |
| | (h) Other Food | 265 | 353 | 341 | 337 | 278 | 292 | 294 | 283 | 310 | 283 | 299 | 316 |
| | **FOOD GROUP** | 285 | 340 | 338 | 346 | 308 | 297 | 307 | 300 | 317 | 309 | 308 | 334 |
| II. | Pan, Supari, Tobacco & Intoxicants | 304 | 353 | 374 | 344 | 388 | 425 | 358 | 467 | 294 | 324 | 352 | 385 |
| III. | Fuel & Light | 296 | 308 | 270 | 446 | 278 | 314 | 344 | 329 | 270 | 298 | 363 | 291 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 253 | 225 | 373 | 292 | 242 | 323 | 381 | 241 | 291 | 402 | 208 |
| VI. | **MISCELLANEOUS:**<br>(a) Medical Care | 566 | 466 | 370 | 293 | 288 | 267 | 387 | 332 | 336 | 295 | 394 | 219 |
| | (b) Education, Recreation & Amusement | 336 | 311 | 521 | 204 | 388 | 385 | 322 | 319 | 328 | 421 | 370 | 368 |
| | (c) Transport & Communication | 348 | 386 | 327 | 333 | 595 | 344 | 347 | 558 | 347 | 408 | 388 | 363 |
| | (d) Personal Care & effects | 264 | 278 | 263 | 284 | 297 | 255 | 272 | 283 | 257 | 313 | 258 | 269 |
| | (e) Others | 320 | 339 | 282 | 422 | 288 | 248 | 283 | 282 | 238 | 297 | 402 | 246 |
| | Miscellaneous Group Index | 360 | 329 | 336 | 306 | 343 | 291 | 312 | 311 | 290 | 352 | 351 | 282 |
| | **GENERAL INDEX** | 275 | 301 | 295 | 325 | 287 | 270 | 290 | 293 | 281 | 282 | 307 | 271 |
| | To convert to Base 1960 Multiply by Linking Factor. | 7.39 | 9.19 | 8.27 | … | 8.26 | 8.56 | 9.25 | 7.92 | 9.31 | 9.05 | … | … |

For Director

Joint Director,

Directorate of Economics and Statistics,

Government of Karnataka, Bangalore.

